ರಾಜಹಂಸ ಗ್ರಂಥಮಾಲೆ, ೧.

# ಮಳೆಗಾಲದ ಮಲೆನಾಡು.

( ಹೃದಯಂಗಮವಾದ ಪತ್ತೆದಾರಿ ಕಥೆ )



ಮುನ್ನುಡಿ.

ಪ್ರೊ. ಆರ್. ವ್ಹಿ. ಜಹಾಗಿರದಾರ ಎಂ. ಎ. ( ಲಂಡನ್ )
ಇವರ ಮುನ್ನುಡಿಯೊಂದಿಗೆ



ಕತೆಗಾರರು
ಶ್ರೀ ದಿವೇಕರ ಕೃಷ್ಣರಾಯರು ( ಸುನೀತ )
ಭದ್ರಾವತಿ.



ಬೆಲೆ ಮೂರಾಣೆ.

# ಪ್ರಕಾಶಕರ ಮನೋದಯ

ನಿತ್ಯ ಮತ್ತು ವಾರಪತ್ರಿಕೆಯ ರೂಪದಿಂದ ನಮ್ಮ **ರಾಜಹಂಸವು** ಕನ್ನಡಿಗರ ಸೇವೆಗೆ ನಿಂತು ೪೦ ವರ್ಷಗಳಾದವು. ಪ್ರೋತ್ಸಾಹನವು ವಿಶೇಷವಾಗಿಲ್ಲದಿದ್ದರೂ ನಾಡೂಳಿಗವನ್ನು ಕರ್ತವ್ಯಬುದ್ಧಿಯಿಂದ ಹೆಚ್ಚು ಹೆಚ್ಚು ಹುರುಪಿನಿಂದ ಸಲ್ಲಿಸಬೇಕೆಂದು ಹಾತೊರೆಯುತ್ತಿದೆ. ಆ ಪ್ರಯತ್ನವೇ ರಾಜಹಂಸದ ವಿಶೇಷಸಂಚಿಕೆ. ಕಳೆದ ವರುಷದಂತೆ ಈ ಸಲವೂ ಆಂಗ್ಲವರ್ಷಾದಿಗೆ ಮೊದಲಿಗಿಂತ ಹೆಚ್ಚಿಗೆ ಸುಂದರವಾದ ವಿಶೇಷಸಂಚಿಕೆಯನ್ನು ಕನ್ನಡಿಗರಿಗೆ ಉಡುಗೊರೆಯಾಗಿ ಕೊಡುವ ಪ್ರತಿವರ್ಷವೂ ಈ ಕ್ರಮವನ್ನು ನಡಿಸುವ-ಸಂಕಲ್ಪವಿದೆ. ಇಂದಿನ '**ರಾಜಹಂಸ ಗ್ರಂಥಮಾಲೆ**' ನಮ್ಮ ಸಾಹಸದ ಮೂರನೆಯ ಕರ್ತವ್ಯವಾಗಿದೆ

ಎಲ್ಲರಿಗೂ ಮೆಚ್ಚುಗೆಯಾದ ಸಾಮಾನ್ಯರಿಗೂ ಸರಳವಾದ ಸರಸವಾದ – ತಿಳಿವನ್ನೀಯುವ-ಮನವನ್ನು ರಂಜಿಸುವ ಕತೆಗಳನ್ನೂ ಚಿಕ್ಕ ಕಾದಂಬರಿಗಳನ್ನೂ ನಾಟಕಗಳನ್ನೂ ಚರಿತ್ರಗಳನ್ನೂ ಆಕರ್ಷಕವಾದ ಅಚ್ಚು ಮೈಕಟ್ಟಿನಲ್ಲಿ ಪ್ರಕಟಿಸುವದು ಮಾಲೆಯ ಕಾರ್ಯ. ಓದಬೇಕೆಂಬವರಿಗೆ ದುಡ್ಡಿಲ್ಲದ ಕಾಲ, ಇದ್ದರೂ ಹೊತ್ತಿಗೆ ತುಟ್ಟಿಯೆನಿಸುವ ಕಾಲ, ಇಂದಿನ ಆರ್ಥಿಕ ಹೀನ ಕಾಲ. ಈ ಕಾಲದಲ್ಲಿ ಜನತೆಯ ವಾಚನಾಭಿರುಚಿಯನ್ನು ಕುದುರಿಸುವದಕ್ಕಾಗಿ ಸರಸ ಸಾಹಿತ್ಯದ ಅಮೃತದೂಟ ಸಾಧ್ಯವಾದ ಮಟ್ಟಿಗೆ ತೀರ ಕಡಿಮೆ ಬೆಲೆಯಲ್ಲಿ ಹೊತ್ತಿಗೆಗಳನ್ನು ಒದಗಿಸುವದೆ ನಮ್ಮ ಗುರಿ. ನಮ್ಮ ಮಾಲೆಗೆ ಮೊದಲನೆಯ ಹೂವಾಗಿ **ಮಳೆಗಾಲದ ಮಲೆನಾಡು** ಹೊರಬಂದದೆ. ಇದಕ್ಕೆ ದೊರೆಯುವ ಜನತೆಯ ಸ್ವಾಗತವನ್ನು ನೋಡಿಕೊಂಡು ಪ್ರಕಾಶನದ ಕಾಲವನ್ನು ನಿಯಮಿತಗೊಳಿಸುವೆವು.

ಇನ್ನು ಯಾರಿಗೆ ಯಾರ ಉಪಕಾರ? ಎಲ್ಲರದು ಎಲ್ಲರಿಗೆ. ಕತೆಗಾರರಂತೆ ನಾವೂ ಶ್ರೀ. ದಿವೇಕರ ಕೃಷ್ಣರಾಯರನ್ನು ಸೊಂಪಾದ ಕತೆಯನ್ನಿತ್ತುದಕ್ಕಾಗಿ, ಪ್ರೊ. ಜಹಾಗೀರದಾರ ರಂಗಾಚಾರ್ಯರನ್ನು ಅದಕ್ಕೆ ತಕ್ಕುದಾದ ಬೆಲೆಯುಳ್ಳ ಮುನ್ನುಡಿಯನ್ನು ಜೋಡಿಸಿದುದಕ್ಕಾಗಿ ಕೃತಜ್ಞತೆಯಿಂದ ನಮಿಸುವೆವು.

ನಾಡಹಬ್ಬದ ಮೊದಲದಿನ
ಚಾ. ವಿ. ವ. ೮೫೪
ತಾ|| ೨೦—೯—೧೯೩೩.

**ಶಂ. ವಾ. ಜಕಾರ.**
ರಾಜಹಂಸ ಕಾರ್ಯಾಲಯ
ಧಾರವಾಡ.



# ಪ್ರಸ್ತಾವನೆ

ನವನಾಗರಿಕತೆಯ ವ್ಯಾಮೋಹಕ್ಕೊಳಪಟ್ಟು, ನಮ್ಮ ಜನಾಂಗವು ದಿನಕ್ರಮೇಣ, ಹಳ್ಳಿಯ ಜೀವನದ ಬಗ್ಗೆ, ಉದಾಸೀನ ಹೊಂದುತ್ತಲಿದೆ.

ಆಧುನಿಕ ನಾಗರಿಕತೆಯ ಶಿಳಿತದಿಂದಲೋ, ಪಾಶ್ಚಾತ್ಯ-ಸಂಸ್ಕೃತಿಯ ಪ್ರಭಾವದಿಂದಲೋ, ಚಿಕ್ಕಂದಿನಿಂದಲೂ, ಶಹರ (ನಗರ) ಗಳಲ್ಲಿ ನೆಲೆಸಿರುವ ಇಂದಿನ ತರುಣರಿಗೆ- ಹಳ್ಳಿಯ ಕಡೆಗೆ ಕಂಣೆತ್ತಿ ನೋಡುವದೂ, ದುಸ್ತರವಾಗಿದೆ.

ಪ್ರಸಿದ್ಧ ತಾತ್ವಿಕ-"ಹಕ್ಸಲಿ" (Huxley) ಯು ಅಂದಂತೆ- ನಮ್ಮ ಸುತ್ತಮುತ್ತಲಿನ ಜನರು ಹೊಟ್ಟೆಗಿಲ್ಲದೆ-ಬಳಲುತ್ತಿರುವಾಗ, ಅನಿವಾರ್ಯ ರೋಗವ್ಯಾಧಿಗಳಿಂದ, ನರಳುತ್ತಿರುವಾಗ, ನಾವು ಮಾತ್ರ, ಸುಖ-ಸಂತೋಷದ-ಪರಮಾವಧಿಯನ್ನು ತಲಪಿದು, ಅನ್ಯಾಯವಾದದ್ದು.

ನಗರನಿವಾಸವೇ-ತಮ್ಮ ಜೀವನ ಸರ್ವಸ್ವವೆಂದು ಹಲುಬಿ- ಹಳ್ಳಿಯ ಜೀವನದ ಬಗ್ಗೆ-ಇರುವ ಅವರ ಅನಾದರ ಮನಸ್ಸಿನ ಒಲುವನ್ನು ಸೂಚಿಸುವದೇ-ಈ ಪುಟ್ಟ ಕತೆಯ ಜೀವಾಳ.

ಸಾಹಿತ್ಯದಲ್ಲಿ ನನಗೆ ಸಾಕಷ್ಟು ಜ್ಞಾನವಿರದಿದ್ದರೂ, ಅಂತಃಸ್ಫೂರ್ತಿಯಿಂದ, ಹಳ್ಳಿಯ ಜೀವನದ ಬಗ್ಗೆ ಬರುವ ವಿಚಾರಗಳನ್ನು ಈ ಕತೆಯ-ಕಟ್ಟಡದಲ್ಲಿ, ಕೂಡಿಟ್ಟದ್ದೇನೆ.

ಕತೆಯ ಬಗೆ–ಸದಭಿಪ್ರಾಯ ಪಟ್ಟು, ಅದನ್ನು ಮುದ್ರಿಸಲು ಸಲಹೆ ಕೊಟ್ಟ ನನ್ನ ಹಿತಚಿಂತಕರಾದ, **ಮ। ರಾ। ಕೇ. ರಂಗಾಚಾರ್ಯರಿಗೂ, ಇನ್ನಿತರ ಗೃಹಸ್ಥರಿಗೂ,** ನನ್ನ ಮನಸಾ ವಂದನೆಗಳು.

ಕತೆಯಲ್ಲಿರುವ ದೋಷಗಳನ್ನು ಲೋಪ ಪಡಿಸಿ–ಉತ್ಸಾಹ ಜನಕವಾದ ಮುನ್ನುಡಿಯನ್ನು ಬರೆದು ಕೊಟ್ಟ ಪರಮಪೂಜ್ಯ, **ಮ। ರಾ। ಪ್ರೊ. ಜಹಾಗೀರದಾರ ರಂಗಾಚಾರ್ಯರಿಗೂ** ಮುದ್ರಣ, ಪ್ರಕಟಣ, ಕಾರ್ಯ ಮಾಡಿದ, **ಮ। ರಾ। ಶಂ. ವಾ. ಜಹಗೀರದಾರವರಿಗೂ,** ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

೮—೯—೩೩

ಸಜ್ಜನ ಸೇವಕ,
**ಕೃ. ವೆಂ. ದಿವೇಕರ.**
ಭದ್ರಾವತಿ

# ಮುನ್ನುಡಿ



**ಈ** ಚಿಕ್ಕದಾದ ಗ್ರಂಥಕ್ಕೆ ಮುನ್ನುಡಿ ಬರೆಯುವದೆಂದಲ್ಲಿ ನನಗೊಂದು ದೊಡ್ಡ ಸಾಹಸವೇ ಎನ್ನಿಸಿದೆ. ಸಕಲರಿಗೂ ಸರಸವೆನ್ನಿಸುವಂತಹ ಕತೆ-ಕಾದಂಬರಿಗಳನ್ನು ಸಾಮಾನ್ಯರಿಗೂ ಸುಲಭವೆನ್ನಿಸುವಂತಹ ಸರಳ ಶೈಲಿಯಲ್ಲಿ ಬರೆಯಿಸಿ ಪ್ರಕಟಿಸುವದೇ ಈ **ರಾಜಹಂಸ ಗ್ರಂಥಮಾಲೆಯ** ಉದ್ದೇಶವೆಂದು ಪ್ರಕಾಶಕರು ಹೇಳಿಕೊಂಡಿದ್ದಾರೆ. ಹೀಗಿರುವಲ್ಲಿ 'ಸಾಹಿತ್ಯದಲ್ಲಿ ಕೂಡ ಪಂಡಿತ- ಪಾಮರ ಭೇದವನ್ನು ಕಲ್ಪಿಸಿಕೊಳ್ಳುವವ' ರೆಂದು ಹೆಸರುಗೆಡುತ್ತಿರುವ ಸಾಹಿತಿಗಳಲ್ಲಿ ಒಬ್ಬನೆಂದಿದ್ದ ನಾನು ಮುನ್ನುಡಿಯನ್ನು ಬರೆಯುವದೆಂತು? ಆದರೂ ಒಂದು ಸಮಾಧಾನ. ಗ್ರಂಥವು ಯಾವ ಮಾಲೆಗೆ ಸೇರಿದುದಾದರೂ ಗ್ರಂಥಕರ್ತರು ಮಾತ್ರ ನನ್ನ ಮಾಲೆಗೆ ಸೇರಿದವರೆಂಬ ಸಮಾಧಾನ. "ನಾನು ಸಾಹಿತಿಯಲ್ಲ, ಏನೋ ಅಂತಃಸ್ಫೂರ್ತಿಯಿಂದ ಬರೆದಿರುವೆ'' ಎಂದು ಗ್ರಂಥಕರ್ತರು ಹೇಳಿಕೊಂಡದ್ದೆ ನಮ್ಮಂತಹರದಾದರೂ ಸಾಹಿತ್ಯ ಸೇವೆಯ ಪಲ್ಲವಿ. ಸಾಹಿತ್ಯದಲ್ಲಿ ಪಂಡಿತ-ಪಾಮರಭೇದವಿಲ್ಲ, ಎಂಬ ಮಾತಿನ ಅರ್ಥವೇನು? ಸಾಹಿತ್ಯದಲ್ಲಿ ಪಂಡಿತರಿಗೆ ಇಲ್ಲವೆ ಪಾಂಡಿತ್ಯಕ್ಕೆ ಸ್ಥಾನವಿಲ್ಲೆಂದೊ? ಇಲ್ಲವೆ ಪಾಮರ-ಮನಸ್ಸಿನ ರಂಜನೆಯೆ ಸಾಹಿತ್ಯವೆಂದೊ? ಹೀಗೆ ತಿಳಿದುಕೊಂಡವರು ಪಂಡಿತರಲ್ಲ, ಅರಣ್ಯ ಪಂಡಿತರು; ಅವರಿಗೆ ಮಾನವ-ವ್ಯವಹಾರದ, ಮನುಷ್ಯನ ಆಚಾರ-ವಿಚಾರಗಳ ತಳಹದಿಯಾದ ಸಮಾಜದ ಅನುಭವವಿಲ್ಲವೆಂದೇ ಹೇಳಬೇಕಾಗುವದು. ಸಮಾಜದಲ್ಲಿ ಇಲ್ಲದ ಸಂಗತಿ- ಸಂನಿವೇಶಗಳನ್ನು ಆಯ್ದುಕೊಂಡು, ಸಮಾಜಕ್ಕೆ- ಸಂಸ್ಕಾರಕ್ಕೆ ಸಲ್ಲದ ರೀತಿಯಲ್ಲಿ ಬಣ್ಣಿಸಿ, ಪಾಮರರ ಮನೋರಂಜನೆಯನ್ನುಂಟುಮಾಡುವದೆ ಸಾಹಿತ್ಯವೆಂದರೆ— ಆ ವೃತ್ತಿಗೂ ವೇಶ್ಯಾವೃತ್ತಿಗೂ ವ್ಯತ್ಯಾಸವೇನು?

ಸಾಹಿತ್ಯದಲ್ಲಿ ಪಂಡಿತ-ಪಾಮರರ ಭೇದವಿಲ್ಲೆಂಬ ಮಾತಿನ ಅರ್ಥವೇ ಬೇರೆಯಾಗಿದೆ. ಸಾಹಿತ್ಯವು ಜೀವನಕ್ಕೆ ನಿಕಟವಾಗಿ ಸಂಬಂಧಿಸಿದುದು. ಪಂಡಿತರಂತೆ ಪಾಮರರಿಗೂ ಜೀವನವಿದೆ· ಅದೇಕೆ? ಜೀವನದ ಸಂಸಾರದಲ್ಲಿ ಪಾಮರರ ಸಂಖ್ಯೆಯೇ ದೊಡ್ಡದು. ಹೀಗಿರುವಲ್ಲಿ ಸಾಹಿತ್ಯವು ಕೂಡ ಪಾಮರರ ಜೀವನಕ್ಕೆ ಸಂಬಂಧಿಸಿರಬೇಕಲ್ಲವೆ? ಕಲಿಯುಗದಲ್ಲಿ ರಾಮ-ನಲ-ಹರಿಶ್ಚಂದ್ರರ ಗೊಡವೆಯನ್ನು ತಪ್ಪಿಸಿ ಸಾಮಾನ್ಯ ಸಂಸಾರಿಗನ ವ್ಯವಹಾರವನ್ನೆ ಸಾಹಿತ್ಯವು ಅನುಸರಿಸಬೇಕಲ್ಲವೆ? ಕಳೆದು ಹೋದ ಸಂಗತಿಗಳಿಗಿಂತ ಬೆಳೆಯುತ್ತಲಿರುವ ಸಂಗತಿಗಳನ್ನೆ ಸಾಹಿತ್ಯವು ಮೂಡಿಸುತ್ತಿರಬೇಕಲ್ಲವೆ? 'ಕೊಳೆಗಾಲ'ದ ಕಾವ್ಯಗಳಿಗಿಂತ 'ಮಳೆಗಾಲದ ಮಲೆನಾಡು' ನಮಗೆ ಬೇಕಾದುದಲ್ಲವೆ? ಅಂದಿನಿಂದ ಇಂದಿನವರೆಗೆ, ಸಾವಿರಾರು ವರ್ಷಗಳ ವರೆಗೆ ಶ್ರೀರಾಮನ ರಾಮಾಯಣವನ್ನು ಓದಿ, ಕೇಳಿ, ಹಾಡಿ, ಕುಣಿದರೂ ನಮ್ಮ ಹಳ್ಳಿಗಳಲ್ಲಿನ ಅಜ್ಞಾನವು ಅಳಿದಿಲ್ಲ, ಬಡತನವು ಬತ್ತಿಲ್ಲ. ಅದೇಕೆ? ದುರ್ಗುಣಗಳ ಪರಿವಾರದಿಂದ ಕೂಡಿಕೊಂಡು ಆ ಅಜ್ಞಾನ, ಆ ಬಡತನ ಬೆಳೆದಿವೆ, ಬೆಳೆಯುತ್ತಲಿವೆ. ಇಂತಹ ಸ್ಥಿತಿಯಲ್ಲೂ ತನ್ನ ದಾರಿಯ 'ಪತ್ತೆ' ತಪ್ಪಿದೆ ನಮ್ಮ ಸಾಹಿತ್ಯಕ್ಕೆ. ಶ್ರೀ. ದಿವೇಕರ ಕೃಷ್ಣರಾಯರ ಈ ಚಿಕ್ಕ ಕತೆಯು ಅಂತಹ ದಾರಿ ತಪ್ಪಿದ 'ಪತ್ತೆದಾರಿ' ಸಾಹಿತ್ಯವಲ್ಲ. "ಅಪ್ಪಾರಾ ಏನ ಬೇಡ ಬುದ್ಧಿ, ಕೀಲೆಣ್ಣೆಗೆ ಸಾಕಾಣೆ" ಎಂದು "ಕೊಟ್ಟುಬಿಡಿ ಸ್ವಾಮೀ ಎಟ್ಟಾಣೆಯ" ಎನ್ನುವ ಕೀಳ್ತನದ ಕಂಗಾಲತನದ ಚುರುಕನಾದ ಸಿದ್ಧನಂತಹ ಹಳ್ಳಿಯುವನನ್ನೂ, "ಕತ್ತಲಾದ್ದರಿಂದ ಕೋಣನ ಮೇಲೆ ಕುಳಿತುಕೊಂಡು ಹೋಗುವದು ಸರಿ ಎನ್ನಿಸಿತು.'' ಎನ್ನುವ ನಾಗರಿಕನನ್ನೂ ಚಿತ್ರಿಸುವ ಈ ಗ್ರಂಥಕರ್ತರಿಗೆ ತಮ್ಮ ಸುತ್ತಲಿನ ಸಮಾಜದ ಅರಿಕೆಯಿದೆ, ಗುಟ್ಟು ಗೊತ್ತಿದೆ ಎಂದು ಹೇಳಬಹುದಲ್ಲವೆ? ಬಹುಜನರಿಗೆ ಅವರ ಶೈಲಿಯಲ್ಲಿ ನಯವಿಲ್ಲ, ಶಬ್ದಗಳು ಸರಿಯಾಗಿಲ್ಲ ಎಂದು ಆಗಾಗ ತೋರಿದರೂ ಗ್ರಂಥಮಾಲೆಯ ಉದ್ದೇಶವೆ ಆ ನ್ಯೂನತೆಗೆ ಸಮಾಧಾನ ಎಂದು ಹೇಳಬಹುದು. ಶ್ರೀ. ದಿವೇಕರರು ಉಪಜೀವನಕ್ಕಾಗಿ ಸಾಹಿತ್ಯಸೇವಕರಾ

ಗಿಲ್ಲ; ಆದುದರಿಂದ ಇವರ ಅಂತಃಸ್ಫೂರ್ತಿಯ ಬೆಳಕು ಇನ್ನೂ ಹೆಚ್ಚಾಗಿ ಪಸರಿಸಬಹುದೆಂದು ನಂಬುವ ಧೈರ್ಯವಿದೆ ನನಗೆ. ಇಂತಹ ಗ್ರಂಥಗಳನ್ನೇ ಪ್ರಕಟಿಸಿದರೆ ಸದ್ಯದ ಗ್ರಂಥಮಾಲೆಯ ಸದುದ್ದೇಶವು ಸಫಲವಾಗುವದಲ್ಲದೆ, ಸಾಹಿತ್ಯಸೇವೆಯಲ್ಲಿ ಒಂದಡಿ ಮುಂದೆ ಸಾಗಿದಂತಾಗುವದು.

ಮಾಳಮಡ್ಡಿ, ಧಾರವಾಡ<br>೨೧-೯-೩೩ } ಆರ್. ವ್ಹಿ. ಜಾಗಿರದಾರ.

# ಮಳೆಗಾಲದ ಮಲೆನಾಡು

ಬೆಳಗಿನ ಉಪಹಾರವನ್ನು ಮುಗಿಸಿ ನನ್ನ ಬರೆವೋದುವ ಕೊಠಡಿಗೆ ಬರುವಷ್ಟರಲ್ಲಿ, ಶಾಮನು ಕೊಠಡಿಯನ್ನು ಕಸಗೂಡಿಸಿ ಚೊಕ್ಕಟಪಡಿಸಿದ್ದನು. ಅಂಚೇ ಜವಾನನು ಕೊಟ್ಟುಹೋದ ದಿನ ಚರಿ. ಮಾಸಪತ್ರಿಕೆ, ಲಕ್ಕೋಟೆಗಳು ಹತ್ತಿರವೇ ಇರುವ ಮೇಜಿನ ಮೇಲೆ ಬಿದ್ದಿದ್ದವು. ಸುಖಾಸನದ ಮೇಲೆ ಕುಳಿತು ಧೂಮ್ರಪಾನ ವನ್ನು ಮಾಡುತ್ತ ಲಕ್ಕೋಟೆಯನ್ನು ತೆರೆದೆನು. ಅದು ನನ್ನ ಪತ್ನಿಯು ತವರೂರಿನಿಂದ ಬರೆದ ಕಾಗದವಿದ್ದಿತು. ಕಾಗದದಲ್ಲಿಯ ಅಭಿಪ್ರಾಯ–

ಕುಶಲ ಶ್ರೀರಾಮ ಹಲಸೂರು

ತಾ॥...............

ಪ್ರಿಯರಿಗೆ– ತಮ್ಮ ಸೌಭಾಗ್ಯವತಿಯು ಮಾಡುವ ಅನೇಕ ವಂದನೆಗಳು. ಸಾಂಪ್ರತ, ತೆರುವಾಯ.

ತಾವು ಬರೆದ ಕಾಗದವು ತಲುಪಿತು, ಅಭಿಪ್ರಾಯವು ತಿಳಿ ಯಿತು. ತಮಗೆ ದಸರೆಯ ರಜಾದಿನಗಳಲ್ಲಿ ಇಲ್ಲಿಗೆ ಬರುವದಕ್ಕಾ ಗುವದಿಲ್ಲವೆಂಬದನ್ನು ಓದಿ ಮನಸ್ಸಿಗೆ ಬಹಳ ಅಸಮಾಧಾನವಾಯಿತು. ಚಿಕ್ಕಂದಿನಿಂದಲೂ, ನಗರವಾಸಿಗಳಾದ ನಿಮಗೆ ಮಳೆಗಾಲದಲ್ಲಿಯ ಮಲೆನಾಡಿನ ಪ್ರವಾಸವು ಮನಸ್ಸಿಗೆ ಬೇಜಾರುಪಡಿಸಬಹುದು. ಆದರೂ ಇಲ್ಲಿ ತಮಗೆ ಆಗತಕ್ಕ ಹೃದಯಪೂರ್ವಕ ಸ್ವಾಗತ, ಮನ್ನಣೆ, ಉಪಚಾರಗಳು, ಮಿಕ್ಕೆಡೆಯಲ್ಲೆಲ್ಲಿಯೂ ಆಗಲಾರವೆಂಬುದು ಖಂಡಿತ.

ತಿ॥ ನಂಜಣ್ಣನಾದರೂ ತಮ್ಮ ಆಗಮನವನ್ನೇ ಆತುರದಿಂದ ನಿರೀಕ್ಷಿಸುತ್ತಿರುವನು. ಚಿ॥ ವಾಸುದೇವನು ಚೆನ್ನಾಗಿದ್ದಾನೆ. ಆಗಾಗ್ಗೆ

ತಮ್ಮ ನೆನಪು ಮಾಡಿಕೊಂಡು ಅಳುತ್ತಾನೆ. ದಯವಿಟ್ಟು ದಸರೆಗೆ ಇಲ್ಲಿ ಖಂಡಿತ ಬರಬೇಕು. ಈ ನನ್ನ ಹೃದಯಪೂರ್ವಕ ಬಿನ್ನಹ ವನ್ನು ಮನ್ನಿಸಿರಿ. ತಾವು ಇಲ್ಲಿಗೆ ಹೊರಡುವ ಮೊದಲು ಕಾಗದ ಬರೆಯಿರಿ. ಬರುವಾಗ್ಗೆ ವಾಸುದೇವನಿಗೋಸ್ಕರ ಏನಾದರೂ ಆಟಿಕೆ, ತಿಂಡಿ, ತೆಗೆದುಕೊಂಡು ಬರಬೇಕು. ಇಂತೀ ವಿನಂತಿ.

ತಮ್ಮ ಗೃಹಿಣಿ.
**"ವತ್ಸಲೆ"**

ಹಲಸೂರು ಶಿವಮೊಗ್ಗ ತಾಲೂಕಿಗೆ ಸೇರಿದ ಒಂದು ಸಾಧಾರಣ ಗ್ರಾಮ. ಒಂದು ಅಂಚೇ ಕಚೇರಿ, ಒಂದು ಪ್ರಾಥಮಿಕ ಶಾಲೆ ಅಲ್ಲಿ ಇವೆ. ಬೇಸಾಯವೇ ಅಲ್ಲಿಯ ಮುಖ್ಯ ಜೀವನವಿದ್ದದರಿಂದಲೋ, ವ್ಯಾಪಾರ ಕೈಗಾರಿಕೆಗಳಿಗೆ ಸಾಕಷ್ಟು ಪ್ರಾಧಾನ್ಯವಿರದ್ದದರಿಂದಲೋ ಸರಕಾರದವರು ಆ ಊರಿಗೆ ರಾಜಮಾರ್ಗದ ಅನುಕೂಲತೆಯನ್ನು ಮಾಡಿಸಿರುವದಿಲ್ಲ. ನನ್ನ ಪತ್ನಿಯ ತವರೂರು ಅದೇ ಹಲಸೂರು. ನನ್ನ ಮದುವೆಯು, ಬೆಂಗಳೂರಲ್ಲಿಯೇ ನೆರವೇರಿದ್ದರಿಂದ, ಇದುವರೆಗೂ ನನ್ನ ಶ್ವಶುರಗೃಹಕ್ಕೆ ಹೋಗುವ ಯೋಗವು ಬಂದಿರಲೇ ಇಲ್ಲ. ಈಗ್ಗೆ ಮೂರು ತಿಂಗಳ ಹಿಂದೆ ನನ್ನ ಮಾವನು ಪರಲೋಕವನ್ನೈದಿದನು. "ನಮ್ಮವರಿ"ಗೆ ಮಮತೆಯಿಂದ ನೋಡುವರಿಬ್ಬರು ಅಣ್ಣಂದಿರಿರುವರು. ಎಲ್ಲಕ್ಕೂ ಹಿರಿಯರ ಹೆಸರು ನಂಜಪ್ಪ. ಅವರು ಪುಣೆಯ ಅಗ್ರಿಕಲ್ಚರಲ್ ಕಾಲೇಜಿನಲ್ಲಿ ಓದುತ್ತಿದ್ದು ಕೊನೆಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ಸಮಯದಲ್ಲಿಯೇ ತಂದೆಯನ್ನು ಕಳೆದುಕೊಂಡರು. ಅವರಿಗೆ ಸ್ವಂತದ ಜಮೀನು ತೋಟಪಟ್ಟಿಗಳಿದ್ದದರಿಂದ, ಸರಕಾರದ ನವಕರಿಗಾಗಿ ಹವಣಿಸಲಿಲ್ಲ. ಅವರ ತಮ್ಮನ ಹೆಸರು ರಾಮಸ್ವಾಮಿ. ಗುಪ್ತ ಪೋಲೀಸ ಇಲಾಖೆಯಲ್ಲಿ ಅವರಿಗೆ ಒಂದು ಹುದ್ದೇದಾರಿಯ ಕೆಲಸವಿದೆ.

* * * * * *

ಈಗೆಂಟು ದಿನಗಳ ಮೊದಲು ಹಲಸೂರಿಗೆ ಬರಬೇಕೆಂದು "ನಮ್ಮವರು" ಪತ್ರಮೂಲಕ ಆಜ್ಞೆಯನ್ನು ಮಾಡಿದ್ದರು. ಆದರೆ ಚಿಕ್ಕಂ

ದಿನಿಂದಲೂ ಬೆಂಗಳೂರ ನಿವಾಸಿಯಾದ ನನಗೆ– ಮಳೆಗಾಲದಲ್ಲಿಯ ಮಲೆನಾಡಿನ ಆ ದರಿದ್ರ ಪ್ರವಾಸವು ಸರಿದೋರಲಿಲ್ಲ. ಆ ಮಾರ್ಗ ದಲ್ಲಿರುವ, ಮೊಳಕಾಲವರೆಗೂ ಹೂತುಹೋಗುವ ಆ ಕೆಸರು, ಎಲ್ಲಿಯೋ ಒಂದು ಕೊಳ್ಳದಲ್ಲಿದ್ದ ಆ ಊರು, ಒಂದರ ಮುಂದೊಂದು ಬೆನ್ನಿಗೆ ಬೆನ್ನು ಎದುರಾಗಿ ಅಸಂಬದ್ಧ ರೀತಿಯಲ್ಲಿ ಕಟ್ಟಿದ ಆ ಊರ ಮನೆ ಗಳು, ಸ್ವಲ್ಪ ಸೆಟೆದು ನಿಂತರೆ ತಲೆಗೆ ತಗಲುವ ಆ ಮನೆಯ ಚಪ್ಪರ, ಒರಗಿ ಕೂತರೆ ಬೆನ್ನೇ ಡೂಗು ಹಾಯಿಸುವ ಆ ಮನೆಯ ಅಂಕು ಡೊಂಕು ಗೋಡೆ, ಮಲಗಿದರೆ ಮೈಯನ್ನೆಲ್ಲ ಗಾಸಿಮಾಡುವ ಆ ತಗ್ಗುಬ್ಬು ನೆಲ, ಎಲೆಯಡಿಕೆ ತಂಬಾಕ ಜಗಿದು ಬಾಯಿ ಇಟ್ಟು ಉಗ್ಳುವ ಮಟ್ಟಿಗೇ ಆ ಗೋಡೆಯಲ್ಲಿ ಕೊರೆದ ಕಿಡಿಕೆ, ಮನೆಯ ಹಿಂದು ಮುಂದೆ ಇರುವ ಅಂಗಳವಾದರೂ ಚೊಕ್ಕಟವಾಗಿದೆಯೆನ್ನಬೇಕೋ ! ಇಲ್ಲ, ಅದರ ಕೃತ್ರಿಮ ಸೌಂದರ್ಯವೇ ಬೇರೆ. ಆ ಮನೆಯ ಮುಂದಂ ಗಳದಲ್ಲಾದ ಕೆಸರಿನಲ್ಲಿ ದನಕರುಗಳು ಧಾರಾಳವಾಗಿ ಹಾಕಿದ ಸಗಣಿ, ಒಂದು ಗೋಡೆ ಪಕ್ಕದಂಗಳದಲ್ಲಿ ದೊಡ್ಡವರು ಸುರಿಸಿದ ಎಲೆಯ ಡಿಕೆ ತಂಬಾಕದ ಉಗಳಿನ ವೃಷ್ಟಿ, ಮತ್ತೊಂದು ಪಕ್ಕದಲ್ಲಿ ಕ್ಷೌರಿಕನು ಅವಸರವಸರದಿಂದೊಗೆದ ಕತ್ತರಿಸಿದ ಕೇಶರಾಶಿ, ಮನೆಯ ಹಿಂಭಾ ಗದಲ್ಲಿ ಚಿಕ್ಕಮಕ್ಕಳು ಮಾಡಿರುವ ಹೇಸಿಕೆ, ಇಂಥ ಕೃತ್ರಿಮ ಸೊಬ ಗುಳ್ಳ ಸೌಂದರ್ಯದ ನಿವಾಸವು, ಬೆಂಗಳೂರು ಹೈಗ್ರಾವುಂಡಿನಲ್ಲಿಯ ಒಂದು ಬಂಗ್ಲೆಯಲ್ಲಿರುವ ನನ್ನ ಮನಸ್ಸಿಗೆ ಸರಿಬರುವದೆಂತು? ದಸ ರೆಯ ರಜಾದಿನಗಳನ್ನು ಕಳೆಯುವದು ಹೇಗೆ? ಮೇಲೆ ವಿವರಿಸಿದ ಕಾರಣದಿಂದಲೆ ನನ್ನ ಭಾರ್ಯೆಗೆ ದಸರೆಯ ರಜಾದಿನಗಳಲ್ಲಿ ಹಲಸೂ ರಿಗೆ ಬರಲಾಗುವದಿಲ್ಲವೆಂದು ಬರೆದು ತಿಳಿಸಿದ್ದೆನು.

ಆದರ ಮಾರುತ್ತರವೆಂದು, ದಸರೆಗೆ ಅಲ್ಲಿ ಬರಲೇಬೇಕೆಂದ್ಯ ಬೇಡಿಕೊಂಡಿದ್ದ ನನ್ನ ಪ್ರೇಯಸಿಯ ಯಾಚನೆಯನ್ನು ತಾತ್ಸಾರಮಾಡು ವದು ನನ್ನಿಂದಾಗಿಲಿಲ್ಲ.

ಬರೆದೆ ಒಂದು ಕಾಗದ. ಮಾರನೇ ದಿನ ಸಾಯಂಕಾಲದ ರೈಲಿನಿಂದಲೇ ಹಲಸೂರಿಗೆ ಬರಲು, ಹೊರಡುವೆನೆಂದು ಅಭಿವಚನವನ್ನಿತ್ತೆ "ನಮ್ಮವರಿಗೆ."

× × × × × ×

ಹಲಸೂರಿಗೆ ಹೋಗಬೇಕಾದರೆ ಬೆಂಗಳೂರಿನಿಂದ ಬೀರೂರಿಗೆ ಬಂದು ಅರಸಾಲು, ಶಿವಮೊಗ್ಗ ಲೈನಿನ ಮೇಲಿರುವ ಬಿದಿರೆ ಎಂಬ ಚಿಕ್ಕ ಸ್ಟೇಶನಿಗೇ ಇಳಿಯಬೇಕು.

ರಾತ್ರಿ ಒಂಭತ್ತು ಘಂಟೆಗೆ ಹೊರಡುವ ಪೂನಾ ಮೇಲಿನಿಂದ ಬೀರೂರಿಗೆ ಹೊರಟೆ. ಜೊತೆಗೆ ಒಂದು ಸೂಟು ಕೇಸ್, ಒಂದು ಮಾಟಾದ ಬೆಡ್ಡಿಂಗ. ಕಾಶೀಕ್ಷೇತ್ರದಿಂದ ತರಲೇಬೇಕಾದ ಗಂಗೋದಕದ ಕಲಶದಂತೆ ಬೆಂಗಳೂರಿನಿಂದ ಒಯ್ಯಬೇಕಾದ ತರಕಾರೀ ಬುಟ್ಟಿಯೂ ಇದ್ದಿತು. ಕಾಫಿ ತುಂಬಿದ ಥರ್ಮಾಫ್ಲ್ಯಾಸ್ಕು ಹೆಗಲಿಗೆ ಹಾಕಿದ್ದೆ. ಚಿಕ್ಕ ವಾಸುದೇವನಿಗೋಸ್ಕರ ಗ್ಲ್ಯಾಕ್ಸೋ ಬಿಸ್ಕತ್ತು ಕೊಳ್ಳುವದನ್ನು ಮರೆಯಲಿಲ್ಲ. ಗಾಡಿಯಲ್ಲಿ ಜನಗಳ ಗಲಾಟೆಯಿರದ್ದರಿಂದ ಆಗಾಗ್ಗೆ ಸುಖವಾಗಿ ನಿದ್ರೆಮಾಡುತ್ತಿದ್ದೆ. ಬೆಳಗಿನ ಆರೂ ಕಾಲು ಘಂಟೆಗೆ ಬಿದಿರೆ ಸ್ಟೇಶನ್ನಿಗೆ ನಮ್ಮ ಬಂಡಿ ಬಂದು ತಲುಪಿತು. ಸಾಮಾನು ಕೆಳಗಿರಿಸಿಕೊಂಡು ಒಬ್ಬ ಕೂಲಿಯವನನ್ನು ಅತ್ತಿತ್ತ ನೋಡುವಷ್ಟರಲ್ಲಿ, ಕಪ್ಪುಬಣ್ಣದ ಆಸಾಮಿಯು ನನ್ನ ಹತ್ತಿರ ಬಂದು–

"ಬೆಂಗಳೂರ್ಲಿಂದಾ ಕಿಸವಪ್ಪ (ನನ್ನ ಹೆಸರು ಕೇಶವನ್) ಅನ್ನೋರ್ಯಾರ್ನ ಬಂದಾಪ್ರೇನು ಬುದ್ಧೀ'' ಎಂದ.

"ಹೌದಯ್ಯ ನಾನೇ; ಹಲಸೂರಿಗೆ ಹೋಗಬೇಕಾಗಿದೆ; ಜಮೀನದಾರ ನಂಜಪ್ಪನವರು ಕಳಿಸಿಕೊಟ್ಟಿದ್ದಾರೇನಯ್ಯ ನಿನ್ನನ್ನು ?''

"ಊ ಬುದ್ಧೀ, ನೀವು ರೈಲಿನಿಂದ ಬಂದದ್ದು ನೋಡಿ, ಎತ್ತಿನ ಗಾಡೀ ಕಟಕೊಂಡು ಹಲಸೂರು ಹೊಳೆ ದಂಡೆಗುಂಟಾ ತಂದು ಬಿಡು ಅಂತಾ ಕಳಿಸಿಕೊಟ್ಟವ್ರೆ ಧನೇರು''

"ಹಲಸೂರಿಗೆ ಹೋಗಬೇಕಾದರೆ ಹೊಳೆ ದಾಟಬೇಕೇನಯ್ಯಾ" ?

"ಹೌದು ಬುದ್ಧಿ ಬಿದ್ರೆಯಿಂದಾ ಹೋದ್ರೆ ಭದ್ರಾ ಹೊಳೆ ದಾಟ ಬೇಕಾದ್ದು ಶಿವಮೊಗ್ಗೆಯಿಂದಾ ಬಂದ್ರೆ ತುಂಗಾ ಹೊಳೆ ದಾಟಬೇಕಾದ್ದು."

ಎತ್ತಿನಗಾಡಿಯ ಪ್ರವಾಸವಲ್ಲದೆ- ಹರಗೋಲಿನ ಸಹವಾಸ ವೊಂದಿದೆ ಎಂದೆಂದುಕೊಂಡೆ.

"ನಿನ್ನ ಹೆಸರೇನಯ್ಯ"?

"ಸಿದ್ದಾ, ಬುದ್ದಿ"

"ಇಲ್ಲಿ ಹೋಟಲೇನಾದರೂ ಇದೆಯೇ?"

"ಇಲ್ಲಾ ಬುದ್ದಿ, ಈ ಹಳ್ಯಾಗ ಎಲ್ಲಿದ್ದ ಬಂದಾತು, ಹಲಸೂರಿ ಗೊಗ್ತ ದಾರ್ಯಾಗ, ನಾಗೊಳ್ಳಿ ಅಂತಾ ಒಂದು ಊರು ಐಯ್ತೆ ಅಲ್ಲಿ ಒಬ್ಬ ಉಡಪೇರವನು ಹೋಟಲಿಟ್ಟ್ಯಾನ್ನೆ."

"ಸರಿ, ಗಾಡೀ ತಗೊಂಡು ಬಾಪ್ಪ ಹೊರಡೊಣ."

"ಆಗಲಿ ಬುದ್ಧಿ" ಎಂದು ಗಾಡೀ ತರುವದಕ್ಕೆ ಹೊರಟ ಸಿದ್ದ.

ಇನ್ನು ನಾನು ಯಾವಾಗ ಹಲಸೂರಿಗೆ ತಲುಪಬಹುದು. ದಾರಿ ಯಲ್ಲಿ ಮಳೆಯಲ್ಲಿ ಸಿಕ್ಕರೆ, ನನ್ನ ಗತಿ ಏನಾದೀತು ಎಂಬ ವಿಚಾರ ಬಂದಿತು. ಬಹಳೇ ಬೇಜಾರಾದ್ದರಿಂದ ಸೂಟಕೇಸಿನಿಂದ, "ವರ್ಡ್ಸ್ ವರ್ಥ್" ಕಾವ್ಯಸಂಗ್ರಹವಿದ್ದ ಪುಸ್ತಕವನ್ನು ಹೊರಗೆಳೆಯುವಷ್ಟರಲ್ಲಿ ಸಿದ್ದನು ನಾಲ್ಕು ಹೆಜ್ಜೆ ದೂರ ಹೋಗಿ ತಿರುಗಿ ಬಂದಿದ್ದನು.

"ಯಾಕಪ್ಪ, ಗಾಡೀ ತರೋಲ್ಲವೆ?" ನಾನೆಂದೆ.

"ಉ, ಸ್ವಾಮಿ, ತನತಿನ್ನಿ. ಕೀಲೆಣ್ಣೆಯಿಲ್ಲಾ, ಮದ್ಯಾನ ಎರಡು ಘಂಟೆಮಟಾ ಉಪವಾಸಯಿರಬೇಕು. ಒಸಿಕಳ್ಳೆಪೂರಿ, ಮೂರು ಕಾಸು ಬೀಡಿ ತೆಗನ್ನಾನಂತಿದ್ದೆ" ಎಂದು ನನ್ನ ಕಡೆಗೆ ತಲೆ ತುರಿಸುತ್ತ ವಿಲಕ್ಷಣ ದೃಷ್ಟಿಯಿಂದ ನೋಡಹತ್ತಿದನು. ಇದೇನೋ ಕಾಂಚಾನ ತೆಗೆಯಬೇಕಾದ ಸಮಯವೆಂದುಕೊಂಡು, ಪರ್ಸನ್ನು (ಹಮ್ಮಿಣಿ) ಜೇಬಿನಿಂದೀಚೆ ತೆಗೆದು-

"ಎಷ್ಟಾಗಬೇಕಯ್ಯಾ ನಿನಗೆ-ಖರ್ಚಿಗೆ?''

"ಅಪ್ಪಾರಾ ಏನು ಬೇಡ ಬುದ್ದಿ ಕೀಲೆಣ್ಣೆಗೆ ನಾಕಾಣೆ''

''ಒಟ್ಟಿಗೆ ಒಂದೇ ಸಲ ಹೇಳಯ್ಯಾ''

"ಅದೇ ಮತ್ತೇ" ಎಂದು ನನಗಿಂತರವಷ್ಟು ಗಟ್ಟಿಯಾಗಿಯೇ ಕೂಗಿ, "ಕೊಟ್ಟುಬಿಡಿ ಸ್ವಾಮಿ ಎಟ್ಟಾಣೆಯ'' ಎಂದು ನುಡಿದ ಸಿದ್ದ.

ಚಿಲ್ಲರಯಿರಲಿಲ್ಲಾ ಕೊಟ್ಟೆ ಒಂದು ರೂಪಾಯಿ ಅವನ ಕೈಗೆ.

"ಲೋ ಜಾಗ್ರತೆ ಗಾಡೀ ತೆಗೆದುಕೊಂಡು ಬಾ. ಊಟದ ಹೊತ್ತಿಗೆ ಊರಿಗೆ ಹೋಗೋಣ''

"ಆಗಲಿ ಬುದ್ಧೀ" ಎಂದವನೇ ಓಡಿದನು.

ಬೆಳಗಿನ ಉಪಹಾರದ ಯೋಚನೆಯುಂಟಾಯಿತು. ವಾಸುದೇವ ನಿಗೋಸ್ಕರ ತಂದ ಬಿಸ್ಕತ್ತಿನ ಮೇಲೆಯೇ ನಡಿಸಿದೆ ದಾಳೀ. ಥರ್ಮಾ ಫ್ಲಾಸ್ಕಿನಲ್ಲಿದ್ದ ಕಾಫಿಯನ್ನುರವಷ್ಟು, ಆರಿ ಹೋಗಿದ್ದರೂ ಉಪಾಯ ವಿಲ್ಲೆಂದು ಕುಡಿದು ಹಸಿವೆಯಾಗಿರದಿದ್ದರೂ--ಉಪಹಾರದ ತಲು ಬನ್ನು ಪೂರಯಿಸಿಕೊಂಡೆ. ಗಾಡಿ ಬರುವ ವರೆಗೂ ಓದೋಣವೆಂದು ನನ್ನ ಅತ್ಯಂತ ಪ್ರೀತಿಯ ವರ್ಡ್ಸ್‌ವರ್ಥನ ಕಾವ್ಯವನ್ನವಲೋಕಿಸ ತೊಡಗಿದೆ, ಗಂಟೆ ಎಂಟಾಯ್ತು, ಒಂಬತ್ತಾಯ್ತು, ಹತ್ತಾಯ್ತು– ಇನ್ನೂ ಸಿದ್ದನು ಬರಲೇ ಇಲ್ಲ, ಪ್ಲ್ಯಾಟಫಾರ್ಮಿನ ಮೇಲೆ ಅತ್ತಿತ್ತ ಓಡಾಡತೊಡಗಿದೆ.

ದೂರದಲ್ಲಿ ಕುಳ್ಳೆತ್ತು ಹೂಡಿದ್ದ ಬೋಳು ಗಾಡಿಯೊಂದು ಬರು ತ್ತಿದ್ದುದು ಕಂಡೆ. ಇದುವರೆಗೂ ಇಂಥ ಗಾಡಿಗಳನ್ನು ನೋಡುತ್ತಿ ದ್ದನೇ ವಿನಾ ಆರೋಹಣವನ್ನೆಂದೂ ಮಾಡಿರಲಿಲ್ಲ. ಇವೊತ್ತಂಥ ಪ್ರಸಂಗವು ಬಂದಿತು. ಗಾಡಿಯು ಹತ್ತಿರ ಬಂದಿತು; ನೋಡಿದೆ– ಒಂದು ಕಡೆ ಕೋಣ, ಒಂದು ಕಡೆ ಎತ್ತು ಹೂಡಿದ್ದ ಗಾಡಿಗೆ.

''ಏನಯ್ಯ ಒಂದು ಕಡೆ ಎತ್ತು ಒಂದು ಕಡೆ ಕೋಣ ಹೂಡಿ ದೆಯೇ?'' ಎಂದು ನುಡಿದೆ ಸಿದ್ದನಿಗೆ.

"ಏನು ಮಾಡಲಿ ಬುದ್ಧಿ, ಜೊತೇ ಎತ್ತು ಎಲ್ಲೊ ತಪ್ಪಿಸಿಕೊಂಡು ಬಿಟ್ಟಿತು''. "ಹುಡಿಕಿ, ಹುಡಕಿ ಬೆಜಾರಾಯ್ತು ಕಡಿಗೆ ಒಡ್ಡರ ಗಂಗಪ್ಪನ್ ತಾವು ಹೋಗಿ ನೀವು ಕೊಟ್ಟ ೧ ರೂಪಾಯಿ ಅವನಿಗೆ ಕೊಟ್ಟು ಕಟಿಕೊಂಡು ಬಂದೆ ಈ ಕೋಣಾ.''

"ಬೇಷ ಒಳ್ಳೆ ಕೆಲಸ ಮಾಡಿದೆ ಈ ಬೋಳು ಗಾಡಿಯ ಪ್ರಯೋಜನವೇನೂ ಇಲ್ಲಾ. ನೀನು ಯಮಧರ್ಮನಂತೆ ಕೋಣದ ಮೇಲೆ ಕೂತುಕೊ, ನಾನು ಪರಶಿವನಂತೆ ಬಸವಣ್ಣನನ್ನೇರುವೆ'' ಎಂದು ವ್ಯಂಗ್ಯಸ್ವರದಿಂದ ನಾನು ನುಡಿದೆನು.

"ಸೈ, ಬಿಡಿ, ಆದ್ರೆ ನಿಮ್ಮ ಬಸವಣ್ಣನ ಮೂಗದಾರ (ಮುಗದಾಣಪ ಹುರಿ) ನನ್ನ ಕೈಲಿರ್ಲಿ. ನನ್ನ ಕೋಣಣ್ಣನ ಮೂಗದಾರ ನಿಮ್ಮ ಕೈಲಿರ್ಲಿ. ಅಂದ್ರೆ ಇಬ್ಬರೂ ಒಂದೇ ಸವನೇ ದಾರೀ ನಡದೇವು ಇಲ್ದೇ ಹೊದ್ರೆ ಪೂರಾ ಪಿಕಲಾಟ'' ಎಂದು ವಿಕಟಹಾಸ್ಯವನ್ನು ಮಾಡುತ್ತ ನುಡಿದನು. ಏನೋ ತಮಾಷೆಗೆಂದು ನಾನೊಂದು ಮಾತೆತ್ತಿದರೆ, ನನ್ನ ತಲೆಮೆಟ್ಟಿ ಹಾರಿ ತಮಾಷೆ ಮಾಡಿದ ಸಿದ್ದನ ವಿಷಯವಾಗಿ ಅನಿವಾರ ಕ್ರೋಧವೂ, ಹಾಸ್ಯವೂ ಉಂಟಾಯಿತು.

''ಲೋ ಈ ಬಸವಣ್ಣ, ಕೋಣಣ್ಣನ ಸಹವಾಸವೇ ಬೇಡ, ಎಲ್ಲಿಯಾದರೂ ಹೊಡೆದೋಡಿಸಿ ಬಿಡು. ಸುಮ್ನೆ ಕಾಲಿನಿಂದ ನಡ್ಯೋದೆ ಸರಿಕಾಣುತ್ತೆ. ಜಾಗ್ರತೆ ಊರನಾದರೂ ಸೇರೇವು'' ಎಂದು ಸ್ವಲ್ಪ ಕ್ರುದ್ಧನಾಗಿಯೇ ನುಡಿದೆನು.

"ಕೋಪಿಸಿಕೋ ಬೇಡಿ ಸ್ವಾಮೀ, ಏನೋ ತಮಾಷೆಮಾಡಿದ್ನಿ ಅಂತಾ. ಆ ಕೆಸರ ದಾರ್‍ಯಾಗ, ಈ ಕೋಣ, ಎತ್ತು, ಗಂಟೆಗೊಂದು ಮೈಲಿನಾರ ನಡದಾವು ನಿಮ್ಮ ಕಡಿಂದಾ ಗಂಟೆಗೊಂದು ಹೆಜ್ಜೀನೂ ಕೀಳಾಕಿಲ್ಲ'' ಎಂದು ಬಹು ನಮ್ರವಾಗಿ ನುಡಿದು ನನ್ನ ಸಾಮಾನುಗಳನ್ನೆಲ್ಲ ತಂದು ಗಾಡಿಯಲ್ಲಿಡುತ್ತಿದ್ದನು. ನನಗಾದರೂ ಬೇರೆ ವಿಧಿಯೇ ಇರದ್ದರಿಂದ ಸುಮ್ಮನೇ ಗಾಡಿಯಲ್ಲಿ ಕುಳಿತುಕೊಳ್ಳಬೇಕಾಯಿತು. ಸಾವಧಾನವಾಗಿ ಹೊರಟಿತು ನಮ್ಮ ಗಾಡಿ.

ಆ ಮಲ್ಲಾಡಿನ ಶೀತ ಹವೆಯಿಂದ ನನಗೆ ಚಳಿಯಾಗಲಾರಂಭಿಸಿತು. ಒಂದು ಸಿಗರೇಟನ್ನಾದರೂ ಸೇದೋಣವೆಂದು ಟಿನ್ನಿನಿಂದ ಒಂದು ಸಿಗರೇಟನ್ನು ತೆಗೆದು ಬಾಯಿಯಲ್ಲಿ ಕಚ್ಚಿದೆನು. ಅದೇ ಸಮಯದಲ್ಲಿ ಸಿದ್ದನಾದರೂ ಬಾಯಲ್ಲಿ ಬೀಡಿ ಕಚ್ಚಿ ನನ್ನ ಕಡೆಗೆ ಹೊರಳಿದನು.

"ನನಗೊಂದು ಕೊಡಿ ಬುದ್ಧಿ ಚಿಗರಿಟ್ನಾ'' ಎಂದು ಆಶೆಬುರುಕುತನದಿಂದ, ತೋರಬಟ್ಟೆನಿಂದ ಸಿಗರೇಟಿನ ಚಿನ್ಹ ಮಾಡಿ, ಸೊಟ್ಟ ಮುಖದಿಂದ ನನ್ನ ನೋಡಿದನು. "ಇನ್ನು ದಾರಿಯುದ್ದಕ್ಕೂ ಸಿಗರೇಟು ಕೇಳಬೇಡಪ್ಪ'' ಎಂದು ಒಂದು ಸಿಗರೇಟ ಕೊಟ್ಟೆ ಅವನಿಗೆ. ಬೆಂಕಿ ಪೆಟ್ಟಿಗೆಗೋಸ್ಕರ ಎಲ್ಲ ಜೇಬನ್ನು ತಡವರಿಸಿ ನೋಡಿದೆ, ಎಲ್ಲಿಯೂ ಇರಲಿಲ್ಲ. ಅದು ಗಲಾಟೆಯಲ್ಲಿ ಸ್ಟೇಶನಿನಲ್ಲಿಯೇ ಬಿದ್ದುಹೋಗಿತ್ತು. ನಮ್ಮ ಸಿದ್ದನಾದರೂ ಎಂಥ ವಸ್ತಾದ, ನಾನಿರುವೆನೆಂದು. ಒಂದು ಬೆಂಕಿ ಕಡ್ಡಿಯನ್ನು ಸಹ ತಂದಿರಲಿಲ್ಲ.

"ಅಯ್ಯಾ ಬೆಂಕೀ ಪೆಟ್ಟಿಗೆ ಸ್ಟೇಶನ್ನಿನಲ್ಲಿಯೇ ಉಳಿದುಹೋಯಿತು. ಮುಂದೆ ಯಾರಾದರೂ ಬೆಂಕಿ ಕಡ್ಡಿ ಕೊಟ್ಟರೆ ಸಿಗರೇಟ ಹೊತ್ತಿಸೋಣ, ಜಾಗ್ರತೆ ಗಾಡಿಹೊಡಿ.''

"ಬಿಡಿ ಸ್ವಾಮೀ ಈ ಕೆಸರ ದಾರ್‍ಯಾಗ ಯಾರಬರ್ತಾರ್ವ್ರಿ, ನಮ್ಮನ್ನೆದುರುಗೊಳ್ಳೋಕೆ. ಈಗಾ ಸರನೇ ಓಡತಾ ಹೋಗಿ ತಗಂಬತ್ತೀನಿ ಕಡ್ಡೀನಾ. ನೀವು ರವೂಟು ಗಾಡೀನಾ ಹೊಡಿತಾ ಇರ್ರಿ.'' ಎಂದವನೇ ಮುಗದಾಣದ ಹಗ್ಗಗಳನ್ನು ನನ್ನ ಕೈಗೆ ಕೊಟ್ಟು ಟಣ್ಣನೆ ಹಾರಿ ಓಡತೊಡಗಿದ.

ನಾನು ಎಷ್ಟು ಹೇಳಿದರೂ ಕಿವಿಗೊಡಲಿಲ್ಲ. ಹೊರಟುಹೋದ ಸಿದ್ದ ಕಡ್ಡಿ ತರುವದಕ್ಕೆ. ನಾನು ಗಾಡಿಹೊಡೆಯುವದಕ್ಕೆ ಮೊದಲು ಮಾಡಿದೆ. ಆದರೆ ಸಾರಥಿತ್ವವು ನನ್ನ ಕಡೆಯಿರುವದೆಂಬದು ಆ ಕೋಣಕ್ಕೆ ತಿಳಿಯಿತೋ ಏನೋ ಹೋಗಹೋಗುತ್ತ ಒಳ್ಳೇ ಕೆಸರಿದ್ದ

ಜಾಗದಲ್ಲಿ ಅದು ಮೆಲ್ಲಗೆ ಕೆಳಗೆ ಕೂಡಹತ್ತಿತು. ಇದೇನೋ ಅನರ್ಥ ವಾಗುವದೆಂದು ಕೆಳಗೆ ಹಾರಿಕೊಂಡೆ. ಕೆಳಗೆ ಕುಳಿತ ಕೋಣವನ್ನು ಎಬ್ಬಿಸುವದಕ್ಕೆ ವಿಶ್ವಪ್ರಯತ್ನ ಮಾಡಿದೆ. ಎಲ್ಲವೂ ವ್ಯರ್ಥವಾಯಿತು. ಕೆಸರಿನಲ್ಲಿ ಬಾಲವನ್ನು ಅದ್ದಿ ಜಾಡಿಸುತ್ತ, ಕಣ್ಣುಮುಚ್ಚಿ ಮೆಲಕಾಡಿಸುತ್ತ, ಕೋಣವು ನಿಶ್ಚಿಂತೆಯಿಂದ ಕುಳಿತೇ ಬಿಟ್ಟಿತು. ಏನು ಬಣ್ಣಿಸಲಿ ನನಗಾದ ನಿರಾಶೆ, ಸಂತಾಪ, ಉದ್ವೇಗವನ್ನು! ಕಾಲದ ಬೆಲೆಯೇ ಗೊತ್ತಿಲ್ಲದ ಈ ಹಳ್ಳಿಯ ಹುಂಬ ಜನರ ಮೂಢತೆಯ ಬಗ್ಗೆ ಕನಿಕರ ವುಂಟಾಯಿತು. ಒಂದು ಬೆಂಕಿ ಕಡ್ಡಿಗಾಗಿ ಎರಡು ಮೂರು ಮೈಲಿ ದೂರ ಓಡಬೇಕೆ ನಮ್ಮ ಸಿದ್ದ! ಯೋಚನೆಗಳು ಬರಲಾರಂಭಿಸಿದವು:– "ನನ್ನಂತೆಯೇ ಸುತ್ತುಮುತ್ತಲಿನ ಜನಾಂಗವನ್ನಷ್ಟೇ ಸುಶಿಕ್ಷಿತರನ್ನಾಗಿರಿಸಿಕೊಂಡು, ನಿವಾಸಸ್ಥಾನವನ್ನಷ್ಟೇ ಭೋಗಭೂಮಿಯನ್ನಾಗಿ ಮಾಡಿಕೊಂಡು, ಸದಾ ಸುಖಾಭಿಲಾಷಿಗಳಾದ ಮಾನವರನೇಕರಿಗೆ, ಇಂಥ ಮಳೆಗಾಲದ ಮಲ್ನಾಡಿನ ಪ್ರವಾಸ ಪ್ರಸಂಗವು ಇದಕ್ಕೂ ಕಲ್ಪನಾತೀತ ದುರ್ಧರ ಪ್ರಸಂಗವು ಒಮ್ಮೆಯಾದರೂ ಬರಲಾರದೇ ಇರದು. ಈ ಮಲೆನಾಡಿನಲ್ಲಿರತಕ್ಕ ಎಲ್ಲ ವ್ಯಕ್ತಿಗಳನ್ನು ಸುಶಿಕ್ಷಿತರನ್ನಾಗಿ ಸನ್ಮಾರ್ಗಪ್ರವೃತ್ತರನ್ನಾಗಿ ಮಾಡಿದ್ದರೆ, ಎಲ್ಲ ಚರಾಚರ ವಸ್ತುಗಳನ್ನು ನಮಗನುಕೂಲ ಪರಿಸ್ಥಿತಿಯಲ್ಲಿರಿಸಿಕೊಂಡಿದ್ದರೆ "ಈ ಮಳೆಗಾಲದಲ್ಲಿಯ ಮಲೆನಾಡೆ'' ಇಂದ್ರನ ನಂದನವನವಾಗಿ ಪರಿಣಮಿಸುತ್ತಿತ್ತು. ಈ ಕೊರತೆಯು ತುಂಬಿಬರುವದು ಹೇಗೆ? ಕಲ್ಪನಾಮಾತ್ರದಿಂದ ತುಂಬಿ ಬರುವದೇ? ಇಲ್ಲ. ಪ್ರತಿಭಾಸಂಪನ್ನ ಕಾವ್ಯರಚನೆಯಿಂದ ಕೈಗೂಡುವಂತಿಲ್ಲ. ಪ್ರಗತಿಪರ ಉಪನ್ಯಾಸ ಮಾಡುವದರಿಂದ ಸಂಪೂರ್ಣ ಯಶ ದೊರಕುವಂತಿಲ್ಲ. ಪ್ರತ್ಯಕ್ಷ ಕಾರ್ಯವನ್ನು ಕೈಕೊಳ್ಳಬೇಕು. ಗ್ರಾಮಸಂಘಟನೆ, ಸಕ್ತಿಶಿಕ್ಷಣ ಮೊದಲಾದವು ಆಚಾರದಲ್ಲಿ ಬರಬೇಕು." ಹೀಗೆ ವಿಶ್ವಕುಟುಂಬಿಯಂತೆ ಅನೇಕ ವಿಚಾರಗಳು ನನ್ನ ತಲೆಯಲ್ಲಿ ಬಂದುಹೋದವು. ಅಷ್ಟು ಹೊತ್ತಿಗೆ ಸಿದ್ಧ ಬೆಂಕೀ ಪೆಟ್ಟಿಗೆ ತಂದಿದ್ದ.

"ಸದ್ಯಕ್ಕೆ ಇವತ್ತೆ ಬಂದೆ ಮಹಾರಾಯಾ, ನಿನಗೆ ಮೊಳಕೈಯಿಂದ ಕೈಮುಗಿಯುತ್ತೇನೆ. ಕೋಣ ನಿನಗೋಸ್ಕರ ಹಾದಿ ಕಾಯುತ್ತಾ ಇದೆ. ರವಷ್ಟು ರಮಿಸಿ ಎಬ್ಬಿಸು" ನಾನೆಂದೆ.

"ಇಲ್ಲ ಸ್ವಾಮೀ ಬಂಡೀ ಏರಿ ಕುಂತ್ಕೊಳ್ರಿ. ಈಗ ಮೋಟ್ರು ಓಡಿಸಿದ್ಹಾಂಗೆ ಹೊಡಿತೇವ್ನಿ ಗಾಡೀನಾ" ಎಂದವನೇ ಕುಳಿತ ಕೋಣದ ಬಾಲವನ್ನು ಹಿಂಡಿ ಹೊಡೆದೆಬ್ಬಿಸಿ ಮಾರ್ಗಕ್ಕೆ ಹಚ್ಚಿದನು. ಸ್ವಲ್ಪ ವಿಶ್ರಾಂತಿ ದೊರಕಿದ್ದರಿಂದಲೊ ಏನೋ! ಕೋಣ ಎತ್ತುಗಳು ಸರ ಸರ ದಾರೀ ನಡೆಯುತ್ತಿದ್ದವು.

"ನಾಗೊಳ್ಳಿಯು ಎಷ್ಟು ದೂರ ಇದೆಯಯ್ಯಾ ಇನ್ನಾ" ಸಿಗ ರೇಟು ಹೊತ್ತಿಸುತ್ತ "ಅಲ್ಲಿಯ ಹೋಟಲು ಚೆನ್ನಾಗಿದೆಯೇ" ನಾನೆಂದೆ.

"ಇನ್ನ ಎರ್ಡೇ ಮೈಲಿ ಆಯ್ತು ಸ್ವಾಮೀ, ಒಬ್ಬ ಉಡಪೇರ ವನು ಬೆಂಗಳೂರಲ್ಲಿದ್ದ ಒಂದು ಹೋಟಲಿಟ್ಟವನೆ. ಕಾಫಿ ತಿಂಡಿ ಒಳ್ಳೇ ಫಸ್ಟುಕಳಾಸ ಮಾಡತಾವ್ನೆ."

"ಯಾಕೆ, ಬೆಂಗಳೂರು ಸರಿಬರಲಿಲ್ಲವೋ ಅವನಿಗೆ?"

"ಅಂದೊಂದು ಮಾತ್ಬೇರೆ ಬುದ್ಧಿ" ಎಂದು ಮುಖ ತಿರಿಗಿಸಿ "ಅವನು, ಯಾರೋ ಒಬ್ಬರ ವಮ್ಮನ್ನಾ ಓಡಿಸಿಕೊಂಡು ಬಂದು ಇಲ್ಲಿ ಅವ್ನೆ."

ಬೆಂಗಳೂರಿನಿಂದ ಒಳ್ಳೇ ಲಾಭಪಡಕೊಂಡು ಬಂದಿರುವನೆಂ ದಂದುಕೊಂಡೆ. ಹೀಗೆ ಆ ಮಾತು ಈ ಮಾತು ಸವಿನಗೆ ಮಾತಾ ಡುತ್ತ ನಾಗೊಳ್ಳಿಗೆ ತಲುಪಿದೆವು. ಹೋಟಲಿನವರೆಗೂ ಕೋಣಹೊ ಡಿದ ಬಂಡಿಯಲ್ಲಿ ಕುಳಿತುಹೋಗುವದಕ್ಕೆ ನನಗೆ ನಾಚಿಕೆಯಾಯಿತು. ಉಪಹಾರಗೃಹವು ಎದುರಿಗೆ ದೂರದಲ್ಲಿ ಕಾಣುತ್ತಿದ್ದದರಿಂದ ಸಿದ್ದ ನಿಗೆ ಬಂಡಿಯನ್ನು ಅಲ್ಲಿಯೇ ಹಾದಿಪಕ್ಕದಲ್ಲಿ ನಿಲ್ಲಿಸ ಹೇಳಿ ಅವನನ್ನು ಕರೆದುಕೊಂಡು ಉಪಹಾರ ಗೃಹಕ್ಕೆ ಹೋದೆನು.

**"ಲಕ್ಷ್ಮೀವೆಂಕಟೇಶ ಉಪಹಾರ ಮಂದಿರ"**ವೆಂದು ಕೆಮ್ಮಣ್ಣು ಸವರಿದ ಗೋಡೆಯ ಮೇಲೆ ಸುಣ್ಣದಿಂದ ಬರೆದಿರುವದು ಕಂಡೆ. ಮಂದಿರವಾದರೂ ಕಬ್ಬಿನ ಗರಿಯ ಚಪ್ಪರದಲ್ಲಿ ರೂಪುಗೊಂಡಿತ್ತು. ಗಿರಾಕಿಗಳಿಗೆ ಕುಳಿತುಕೊಳ್ಳುವದಕ್ಕೋಸ್ಕರ ಬೆಂಚು ಮೇಜಿನ ವ್ಯವ ಸ್ಥೆಯು ಇನ್ನೂ ಆಗಿರಲಿಲ್ಲಾದ್ದರಿಂದ, ಎರಡು ಒಡಕ ಡಬ್ಬಿಯ ಮೇಲಿ

ರುವ ಹಲಗೆಯ ಮೇಲೆ ಕುಳಿತುಕೊಳ್ಳಬೇಕಾಗಿತ್ತು. ತಿಂಡೀ ತಿಂದ ನಂತರ, ಒಗೆದ ಎಂಜಲೆಲೆಗಳು ಗಾಳಿಗೆ ಚಕ್ಕಂದದಿಂದ ಅತ್ತಿಂದಿತ್ತ ಇತ್ತಿಂದತ್ತ ಹಾರಾಡುತ್ತಿದ್ದವು. ನಾನು ಒಳಗೆ ಹೋಗದೆ ಹೊರಗೇ ನಿಂತಿದ್ದೆನು.

"ಲಾ, ಮಾಣೀ ಈ ನಮ್ಮ ರಾಯರು ಬೆಂಗಳೂರ್ನಿಂದಾ ಬಂದವ್ರೆ, ನಮಿಗೆ ಕೊಡೊಂತ ಕಾಫಿ ಇವರಿಗೆ ಸೇರದು, ಒಳ್ಳೇ ಬಿಸಿ ಬಿಸಿ, ಸಿಪ್ಪಿಸಲ್ ಕಾಫಿ ಕೊಡು.'' ಸಿದ್ದನು ಒಳ್ಳೆ ಜಂಬದಿಂದಂದ. "ಎಂಥದುೀ ಸಿಪ್ಪಿಸಿಲ್ ಕಾಫಿ" ಹುಬ್ಬು ಹಣೆಗೇರಿಸಿ, ಮಂಗಳೂರ ರಾಗ ತೆಗೆದು ಅಂದ ಮಾಣಿ.

ಎಲೆಯಡಿಕೆ ತಂಬಾಕದುಗಳನ್ನು ಬಾಯಿಯಲ್ಲಿ ತುಂಬಿಕೊಂಡು ಬಂದು, ತುಟಿಗೆ ಎರಡು ಬಟ್ಟು ಹಚ್ಚಿ "ಪಿಚಕ್" ಎಂದು ನಾನಿದ್ದಲ್ಲಿ ಉಗುಳಿ "ಅಯ್ಯನವರ ಸ್ಪೇಶಲ್ ಕಾಫಿ ಮಾಣೀ'' ಎಂದು ಅವನಿಗಿಂತ ಹೆಚ್ಚಿನ ರಾಗ ತೆಗೆದು ಅಂದ, ಹೋಟಲಿನ ಯಜಮಾನ. ಸುದೈವದಿಂದ, ಎಲ್ಲ ಉಗುಳು ನನ್ನ ಮೇಲೆ ಬೀಳಲಿಲ್ಲ. ಕೆಲವು ತುಷಾರಗಳು ಮಾತ್ರ ನನ್ನ ಶುಭ್ರ ಪಂಚೆಗೆ ಸಿಡಿದು ಉಪಹಾರ ಮಂದಿರಕ್ಕೆ, ಬೆಟ್ಟಕೊಟ್ಟ ಗುರುತನ್ನು ಮಾಡಿದವು.

"ತಮ್ಗೆ ತಿಂಡಿ ಏನ್ಬೇಡವೇ" ಯಜಮಾನನೆಂದ.

''ಬರೀ ಕಾಫೀ ಸಾಕು'' ನಾನೆಂದೆ.

ಮಾಣಿಯು, ಜೋಕೆಯಿಂದ ಕಪಾಟಿನಲ್ಲಿಟ್ಟಿದ್ದ ಗಾಜಿನ ಕಪ್ಪೊಂದನ್ನು ತೆಗೆದು ಬಹು ಆಶ್ಚರ್ಯತೆಯಿಂದ ನನ್ನ ಕಡೆಗೆ ನೋಡುತ್ತ, ಕೆಳಗೆ ತಾನುಟ್ಟ ಕೊಳೆ ಪಂಚೆಯಿಂದಲೇ ಆ ಕಪ್ಪನ್ನೊರಸಿ ಒಳಗೆ ಹೋಗಿ ಕಾಫಿಯನ್ನು ನನಗೆ ತಂದುಕೊಟ್ಟನು. ಕಪ್ಪನ್ನು ತುಟಿಗೆ ಹಚ್ಚಿದೆನು, ಈರುಳ್ಳಿ ಇಂಗಿನ ವಾಸನೆಯು ನಾಶಿಕರಂಧ್ರಕ್ಕೇರಿತು-ಆದರೂ ಉಸುರಾಡದೆ, ನನಗಾದ ಕ್ಷುಧಾಶಾಂತಿಗೆಂತಲೋ "ಕಾಫಿ'' ಎಂಬ ಭ್ರಮೆಗೊಳಿಸುವ ಹೆಸರು ಆದಕ್ಕಿರುವದೆಂತಲೋ-ಒಂದು ಗುಟುಕು ಕುಡಿದೆನು. ಜುಲಾಬಾದೀತೆಂಬ ಭಯದಿಂದ, ಮಿಕ್ಕ

ಕಾಫಿಯನ್ನೆಲ್ಲ, ಚರಂಡಿಗೆ ಸುರುವಿದೆನು. ಇಷ್ಟರಲ್ಲಿ ನಮ್ಮ ಸಿದ್ದನು, ನಾಲ್ಕು ಇಡ್ಲಿ, ಒಂದು ಪ್ಲೇಟು ಉಪ್ಪಿಟ್ಟು, ಒಂದು ಲೋಟ ಕಾಫಿ, ಬಿಟ್ಟಿ ಸಿಕ್ಕದ್ದೆಂದು ಗೆಬರಿದ್ದನು. ಈ ಹಳ್ಳಿಯ ಹುಂಬ ಜನರೆಲ್ಲ, ಸುಶಿಕ್ಷಿತರೂ, ಸುವ್ಯವಸ್ಥಾಪಕರೂ ಆದ ನಂತರವೇ, ಉಪಹಾರಗೃಹ ಗಳ ಪ್ರಸಾರವಾಗಿದ್ದರೆ ಚೆನ್ನಾಗಿತ್ತೆಂದು, ಅವುಗಳ ಉತ್ಪಾದಕರೂ ಉತ್ತೇಜಕರೂ, ನಮ್ಮಂಥ ಸುಧಾರಕ ಪಂಥದವರೇ ಇದ್ದದರಿಂದ. ನಾನು ಕಾಫೀ ಸಂಬಂಧ ಯಜಮಾನನ ಕಡೆಗೆ ತಕರಾರು ಮಾಡಲಿಲ್ಲ.

"ಸ್ಪೇಶಲ್ ಕಾಫಿ ಡಬ್ಬಲ್ ಚಾರ್ಜು ಎರಡಾಣೆ-ಇಬ್ಬರವೂ ಸೇರಿ ಆರಾಣೆ" ಎಂದು ಮಾಣಿ ಕೂಗುತ್ತ, ಕಾಸಿಗೋಸ್ಕರ ನನ್ನ ಕಡೆಗೆ ಕೈಯೊಡ್ಡಿದ. ಒಂದು ರೂಪಾಯಿ ಕೊಟ್ಟೆ ಅವನ ಕೈಗೆ. ಅವನು ಒಳಗೆ ಕುಳಿತಿದ್ದ ಒಬ್ಬ ತರುಣಿಯ ಕೈಲಿ ರೂಪಾಯಿ ಕೊಟ್ಟು ಬಾಕೀ ಚಿಲ್ಲರೇ ತಂದ. ಆ ತರುಣಿಯು, ಸಿದ್ದನು ಹೇಳಿದ ಬೆಂಗಳೂರ ಅಮ್ಮ ನಿರಬಹುದೆಂದುಕೊಂಡೆ ಮನಸ್ಸಿನಲ್ಲಿ. ಕೈಗಡಿಯಾಳ ನೋಡಿದೆ, ಹನ್ನೆರಡೂವರೇ ಆಗಿತ್ತು ಬಹಳ ಹೊತ್ತಾಯಿತೆಂದು ಸಿದ್ದನನ್ನು ಕರಕೊಂಡು ಗಾಡಿಯ ಹತ್ತಿರಕ್ಕೆ ಬಂದೆ. ಅವನಿಗೆ ಜಾಗ್ರತೆ ಗಾಡೀ ಹೊಡೆಯಲಿಕ್ಕೆ ಹೇಳಿ ಹುರಿದುಂಬಿಸಿದೆ. ಸಾಗಿತು ನಮ್ಮ ಗಾಡಿಯು. ಹೋಗುವಾಗ್ಗೆ ಮತ್ತೊಮ್ಮೆ ಉಪಹಾರಗೃಹವನ್ನು ನೋಡಿದೆನು. **"ಲಕ್ಷ್ಮೀವೆಂಕಟೇಶ"** ಉಪಹಾರ ಮಂದಿರವೆಂಬ ಹೆಸುರು, ಢಾಳಾಗಿ ಕಂಡಿತು. ತಿರುಪತೀ ವೆಂಕಟೇಶನು ಒಂದು ಬಗೆಯಾಗಿ ದುಡ್ಡು ಸೆಳೆಯುತ್ತಿದ್ದರೆ, ಈ ಲಕ್ಷ್ಮೀವೆಂಕಟೇಶನು ಒಂದು ಬಗೆಯಾಗಿ ದುಡ್ಡು ಸೆಳೆಯುತ್ತಿರುವನೆಂಬದು ಹೊಳೆಯಿತು.

ನಾಗೊಳ್ಳಿಯಿಂದ, ನಮ್ಮ ವೃಷಭ-ಮಹಿಷ ರಥವು ಸುಮಾರು ನಾಲ್ಕು ಮೈಲು ಯಾವ ತೊಂದರೆಗೂ ಒಳಗಾಗದೆ, ಸಾವಧಾನದಿಂದ ನಡೆಯಿತು. ನನಗೆ ರಾತ್ರಿಯಲ್ಲಿ ಸರಿಯಾಗಿ ನಿದ್ರೆಯಿಲ್ಲದ್ದರಿಂದ ಮೆಲ್ಲಗೆ ತೂಕಡಿಸಿ ತೂಕಡಿಸಿ ಹಾಗೇ ಒರಗಿಕೊಂಡೆನು. ಆ ತಂದ್ರಾ ವಸ್ಥೆ (ಅರೆಬರೆನಿದ್ದೆ) ಯಲ್ಲಿರುವಾಗ, ಕೆಲವು ದಿನಗಳ ಮೊದಲೇ ಕೇಳಿದ ಉಡಿಪಿ ಲಕ್ಷ್ಮೀಬಾಯಿಯ--ಕರ್ಣಮಧುರ, ಸಂಗೀತದ

ಇಂಚರವು ಕಿವಿಯಲ್ಲಿ ನಿನದಿಸತೊಡಗಿತು. ಆನಂದವೇ ಆನಂದ! ಆ ಮಲೆನಾಡಿನಲ್ಲಿಯ ಆ ತಂದ್ರಾವಸ್ಥೆಯಲ್ಲಿಯ ಸಂಗೀತ ಸುಖವನ್ನು ಬಹಳ ಹೊತ್ತು ಅನುಭವಿಸಲಿಲ್ಲ. ನಮ್ಮ ಬಂಡಿಯು ಒಗ್ಗಾಲಿಯಾಗಿ ಹೊರಳಿದಾಗ, ತವೆಯೊಂದು ನನ್ನ ಹಣೆಗೆ ತಗಲಿ ಎಚ್ಚರವಾದಾಗ ಲಕ್ಷ್ಮೀಬಾಯಿಯ ಹಾಡುವ ಮುಖವನೇನೂ ಕಾಣದೆ ನಮ್ಮ ಸಿದ್ದನ ಹಲಿಗೆ ಮೋರೆಯು ಕಂಡಿತು. ಅವನು ಬೇಕಾಗಿ ಧ್ವನಿ ಕುಗ್ಗಿಸಿ ಹಾಡುತ್ತಿದ್ದನು. ಈ ಮಲೆನಾಡಿನಲ್ಲಿ ಗಾಡೀ ಹೊಡೆಯುವವರು ಒಬ್ಬೊಂಟಿಗರಾಗಿದ್ದಾಗ, ಪದ ಹೇಳುವ ವಾಡಿಕೆಯೊಂದಿದೆ ಎಂಬದು ಇಂದು ನನ್ನ ಅನುಭವಕ್ಕೆ ಬಂದಿತು.

"ಲೋ ಸಿದ್ಧ, ಸಂಗೀತ ನಡೆಸಿದ್ದೆಯೇನಯ್ಯ" ಎಂದೆ ನಾನು.

"ಉ" ನಾಚಿಕೆಯಿಂದ ಮುಖ ತಿರಿಗಿಸಿ "ಹಾಡತಾ ಇದ್ದೆ ಬುದ್ಧಿ" ಸಿದ್ದನೆಂದ.

"ಯಾವ ಡ್ರಾಮಾದೊಳಗಿಂದು?" ನಾನೆಂದೆ.

"ಚೋರ ಕತೆ ಅನ್ನೊ ನಾಟ್ಕ ಆಡಿದ್ರು ಬುದ್ದಿ ಭದ್ರಾವತಿಯಾಗೆ. ಅದರಾಗಿಂದೊಂದು ಹಾಡನ್ನಂದೆ ಬುದ್ದಿ" ಸಿದ್ದನೆಂದ.

ಸುಪ್ರಸಿದ್ಧ ಕವಿ--ನಾಟಕಕಾರರಾದ ಕಾಲಿದಾಸ, ಶೇಕ್ಸಪೀಯರರಿಂದ, ಮೂರ್ತಿರಾಯರು ಬರೆದ "ಆಹುತಿ" ಎಂಬ ಈಚಿನ ನಾಟಕದವರೆಗೂ ಎಲ್ಲ ನಾಟಕಗಳನ್ನು ನಾನು ಪಾರಾಯಣ ಮಾಡಿದವನು; ಈ "ಚೋರಕತೆ" ಯೆಂಬ ನಾಟಕವನ್ನು ಓದಿರಲಿಲ್ಲ. ಕಂಡಿರಲಿಲ್ಲ.

"ಚೋರ ಕತೆ ನಾಟಕವಿರುವದೇನಯ್ಯ?" ನಾನೆಂದೆ.

"ಇಲ್ಲ ಬುದ್ಧಿ, ಬಾಗವತರ ಮದ್ಲಿ, ತಾಳ ಬಾರಿಸಿ ಆಡೋ ಬೈಲಾಟ" ಸಿದ್ದನೆಂದ.

ನಾನು ತಂದ್ರಾವಸ್ಥೆಯಲ್ಲಿ ಕೇಳಿದ, ಉಡಪೀ ಲಕ್ಷ್ಮಿಬಾಯಿಯ ಸಂಗೀತವನ್ನು, ಇವನ ಬಾಯಿಂದ ಕೇಳೇನೆಂಬ ಆಶೆಯಿಂದ ನಾಟಕದ ಪ್ರಸ್ತಾಪವನ್ನು ತೆಗೆದೆ--ಆಶೆಯೇನು ಪೂರಯಿಸಲಿಲ್ಲ--ಎಂದು ಉದ್ವಿಗ್ನನಾಗಿರುವಾಗ, ನಮ್ಮ ಬಂಡಿಯು ಒಂದು ಚಕ್ರದ ಕಬ್ಬಿಣದ

ಕಟ್ಟು (Flat iron round the wheel) ಕಳಚಿ ಕೆಳಗೆ ಬಿದ್ದಿತು. ಸಿದ್ದನು ಗಾಬರಿಯಾಗಿ ಬಂಡಿಯನ್ನು ತರುಬಿ–

"ಸ್ವಾಮಿ ಗಾಲೀಹಳಿ ಕಳಿಚ್ಕೊಂಗಿಬಿಟ್ಟಿತು. ಇನ್ನು ಬಂಡೀ ಒಳಗೆ ಕುಂದ್ರೋದು ಅಪಾಯ. ಸುಮ್ನೆ ಕಾಲಿಲೆ ನಡಕೊಂಡು ಸ್ವಲ್ಪ ದೂರ ಹೋಗಾನಾ, ಇಲ್ಲೇ ಹೊನ್ನೇರಿ ಅಂತಾ ಒಂಧಳ್ಳಿಗಂಟಾ" ಸಿದ್ದನು ಬಹು ಆರ್ಜವ ಸ್ವರದಿಂದ ನುಡಿದನು.

"ಈ ಬೋಳು ಗಾಡೀ ಬೇಡವೆಂದು ಮೊದಲೇ ಹೇಳ್ಳಿಲ್ವೆ ನಿನಗೆ!" ನಾನು ಬಹು ಬೇಸರಿಕೆಯಿಂದ ನುಡಿದೆನು.

"ಆಗಲಿ ಬುದ್ದಿ, ಹೊನ್ನೇರಿ ಇಲ್ಲೆ ಅರ್ಧ ಮೇಲಿ ಐತಿ, ಅಲ್ಲಿ ಕುಲಿಮೆ ಸಾಬಗೆ (ಕಮ್ಮಾರ ಕೆಲಸ ಮಾಡುವ ಮುಸಲ್ಮಾನ) ಚಕ್ರಕ್ಕೆ ಹಳೀ ಕುಂದ್ರುಸೊದ್ಕೆ ಕೊಟ್ಟು ಬಿಟ್ಟು ಮುಂದ್ಕೆ ಕಾಲೀಲೆ ನಡಕೊಂಡು ಹೋಗಾನಂತೆ" ಎಂದು ಸಿದ್ದನು ಕಳಚಿ ಬಿದ್ದ ಕಟ್ಟನ್ನು ಬಂಡಿಯಲ್ಲಿಟ್ಟನು. ನಾನು ಕೆಸರಿನಲ್ಲಿ ದಾರೀ ನಡೆಯುತ್ತಿದ್ದೆ. ಕೆಸರಿನಲ್ಲಿ ಹೆಜ್ಜೆಗಳನ್ನೆತ್ತುವದು ಬಹಳ ದುಸ್ತರವಾಗಿತ್ತು. ಸುದೈವಕ್ಕೆ ಮಳೆ ಬರುತ್ತಿರಲಿಲ್ಲ. ಹೊನ್ನೇರಿಯವರೆಗೆ ಅರ್ಧ ಮೈಲು ಬರುವವರೆಗೆ ಸಾಯಂಕಾಲದ ೬ ಘಂಟೆಯಾಯಿತು. ಕಮ್ಮಾರ ಶಾಲೆಯು. ಊರ ಹೊರಗೆ ಹಲಸೂರಿಗೆ ಹೋಗುವ ಮಾರ್ಗದ ಪಕ್ಕದಲ್ಲಿಯೇ ಇದ್ದಿತು. ಸಿದ್ದನು ಗಾಡಿಯನ್ನು ನಿಲ್ಲಿಸಿ, ವೃಷಭ ಮಹಿಷರ ಕೊರಳು ಹರಿದನು ನಾನು ವಿಶ್ರಾಂತಿಗಾಗಿ ಒಂದು ಕಲ್ಲಿನ ಮೇಲೆ ಕುಳಿತುಕೊಂಡೆನು.

"ಏನ್ರೀ ಸಾಹೇಬರೆ, ನಾನು ಈ ರಾಯರ್ನ ಹೊಳೆದಂಡಿಗಂಟಾ ಬಿಟ್ಟು ಬರ್ತೆನಿ, ಅದೂವರ್ಗೆ ಈ ಚಕ್ರಕ್ಕೆ ಕಟ್ಟು ಕುಂದ್ರಿಸಿಟ್ಟು ಬಿಡಿ." ಸಿದ್ದನು ಕಟ್ಟನ್ನು ಕೆಳಗಿಳಿಸುತ್ತೆಂದನು.

"ಅರೇ! ನಿಮ್ದು ರಾಯರ್ ಬಿತ್ತು, ಹೊಳೆವಳ್ಗೆ; ನೀನು ಮೊನ್ನೆ ಬಿದಿರಿಗೆ ಹೋಗ್ತಾ ಒಂದು ಕಟ್ಟುಹಾಕಿಸಿಕೊಂಡದ್ದು–ದುಡ್ಡು ಕೊಡು ಮೊದಲು" ಸಾಹೇಬನು ಗದ್ದರಿಸಿದ. ಎದ್ದಿರಾ ರಾಯರೇ ಅಂದರೆ

ನಿಮ್ಮ ಮುಂಡಾಸ ಮೂರು ಮೊಳ ಉದ್ದವೇಕೆ? ಎಂದು ಜಗಳಕ್ಕೆ ಬರುವ ಈ ಸಾಹೇಬನನ್ನು ಕಂಡು ಕೌತುಕವಾಯಿತು ನನಗೆ. ನಾನು ಈ ತುರುಕನ ಯಾವ ಅಪರಾಧವನ್ನೂ ಮಾಡಿರಲಿಲ್ಲ. ಆದರೂ ನನ್ನನ್ನು ಹೊಳೆದೂಡುವ ಮಾತೆತ್ತಿದ. ಈ ಒರಟು ಜನರ ಸಹ ವಾಸವೇತಕೆಂದು ಸುಮ್ಮನಿದ್ದೆ.

"ಕೊಡತೀವ್ನಿ ಕಣಿಯಾ'' ಸಿದ್ದನೆಂದ.

"ಉಂ ವೊ ಸಬ್ ಝೂಟ್, ಪಹಿಲೇ ಪೈಸೇ ನಿಕಾಲ"

"ಅಯ್ಯೋ ಮರಾಯಾ, ಖಂಡಿತ ಕೊಡತೀವ್ನಿ ಕಣೋ. ಗಾಡೀ ಎತ್ತು ಇಲ್ಲೇ ಬಿಟ್ಟು ಹೋಗತೀವ್ನಿ''

"ಅರೇ! ಆಗೋದಿಲ್ಲಾ ಹೋಗು''

ಸಿದ್ದನು ಸಾಹೇಬರಿಗೆ ಎಷ್ಟು ದೀನವಾಣಿಯಿಂದ ಹೇಳಿಕೊಂಡರೂ ದಯೆಬರಲಿಲ್ಲ ಅವನಿಗೆ. ಕಡೆಗೆ ಸಿದ್ದನ ವಕ್ರದೃಷ್ಟಿಯು ನನ್ನ ಕಡೆಗೆ ತಿರುಗಿತು.

"ಸ್ವಾಮೀ" ನನ್ನ ಕಡೆಗೆ ಅರ್ಥಪೂರ್ಣ ದೃಷ್ಟಿಯಿಂದ ನೋಡುತ್ತ ಸಿದ್ದನೆಂದ.

"ಏನಯ್ಯ" ನಾನೆಂದೆ.

"ಈ ಸಾಬಿಗೆ ಒಂದೂವರೀ ರೂಪಾಯಿ ಕೊಡಬೇಕಿತ್ತು" ಸಿದ್ದನೆಂದ.

ಬಹು ಕಷ್ಟಕ್ಕೆ ಬಂದಿತು ನನಗೆ. ಬೆಂಗಳೂರಿಂದ ಬಿದಿರೆಯ ವರೆಗೂ, ಮೂರು ರೂಪಾಯಿ ಆರು ಆಣೆ, ೧೭೦ ಮೈಲಿನ ಪ್ರವಾಸಕ್ಕೆ ಕೊಟ್ಟಿದ್ದಾದರೆ– ಬಿದಿರೆಯಿಂದಾ ಹೊನ್ನೇರಿಯ ವರೆಗಿನ ಸೊಟ್ಟೆ ಹತ್ತು ಮೈಲಿನ ಪ್ರವಾಸಕ್ಕೆ ಅಷ್ಟೇ ಹಣವನ್ನು ಕೊಡಬೇಕಾಯಿತು. ಇದಲ್ಲದೆ ಅಂಬಿಗನಿಗೆ ಕೊಡಬೇಕಾದ ಮಾಮೂಲು, ನಮ್ಮ ಸಿದ್ದನಿಗೆ ಮಾಡಬೇಕಾದ ಬಹುಮಾನ ಬೇರೆಯೇ ಇದೆ. ಮಲೆನಾಡಿನ ಪ್ರವಾಸ

ವಲ್ಲವೇ? ದಾರಿಯಲ್ಲಾದ ಈ ಧನವ್ಯಯದ ಬಗ್ಗೆ ನನ್ನ ಪತ್ನಿಗೆ- ನಂಜಪ್ಪನವರಿಗೆ ಮೃದುವಾಗಿ ಉಪಹಾಸ್ಯ (ಚೇಷ್ಟೆ) ಮಾಡಬಹುದೆಂದು ೧-೮-೦ ಯನ್ನು ಸಿದ್ದನ ಕೈಗಿತ್ತೆನು. ಅವನು ಹರ್ಷ ಚಿತ್ತನಾಗಿ ಕಮ್ಮಾರನಿಗೆ ಆ ಹಣ ಕೊಟ್ಟು, ಚಕ್ರಕ್ಕೆ ಕಟ್ಟು ಹಾಕಹೇಳಿದನು. ನನ್ನ ಸಾಮಾನುಗಳನ್ನು ಬಂಡಿಯಿಂದಿಳಿಸಿ ಕೋಣನ ಮೇಲೆ ಹೇರ ಹತ್ತಿದನು.

"ಯಾಕಪ್ಪಾ ಸಾಮಾನೆಲ್ಲಾ ಕೋಣನ ಮೇಲೆ ಹೇರತೀಯಾ?" ನಾನೆಂದೆ.

"ಇನ್ನು ಹೊಳೆ ದಂಡೆಗಂಟಾ ಪೂರಾ ಕೆಸರಾಗ ಎಲ್ಲ ಸಾಮಾನು ತಲೆಮ್ಯಾಗೆ ಹೊತಗೊಂಡು ಹೋಗಾಕಾದೀತೇ ಬುದ್ಧಿ" ಸಿದ್ದನೆಂದ.

"ಹಾಗಾದರೆ ಎತ್ತಿನ ಮೇಲಾದರೂ ಹೇರಯ್ಯಾ ರವಷ್ಟು ಚುರುಕಾಗಿನಾದರೂ ನಡದೀತು."

"ಓ? ಬಿಡಿ ಬುದ್ಧಿ, ಒಡ್ಡರ ಗಂಗಪ್ಪನಿಗೆ ರುಪಾಯೇನು ಪುಗಸೆಟ್ಟೆ ಕೊಡಬೇಕಾ?"

"ಸರಿಯಪ್ಪ! ಅರ್ಧಾ ಹಾದೀಲಿ ಎಲ್ಲಾದರೂ ಈ ಕೋಣ ನೆಲಾ ಕಟ್ಟಿದರೆ ಕಾಲುಕಟ್ಟೆ ಹೆಗಲ ಮೇಲೆ ಹೊತಗೊಂಡು ಹೋಗಿ, ಒಡ್ಡರ ಗಂಗಪ್ಪನಿಗೆ ತಲ್ಪಿಸೊ ಹೊತ್ತು ಬಂದೀತು!" ನಾನೆಂದೆ.

"ಇಲ್ಲಾ ಬುದ್ಧಿ ನಾನಿವ್ನಿ ಜತೆಗೆ, ಹಾಗೇನಾದ್ರೂವೆ ಕೋಣ ನೆಲ ಕಟ್ಟಿದರೆ" ಎಂದು ಸಾಮಾನನ್ನೆಲ್ಲ ಹೇರಿ ಹೊರಡಲು ಸಿದ್ಧನಾದನು ಸಿದ್ದ.

ಹೊನ್ನೇರಿಯಿಂದ ಕಾಲಿನಿಂದಲೇ ನಡೆಯುತ್ತ ಹೊರಟೆವು ಊರು ಬಿಟ್ಟು ೨ ಮೈಲಿನ ಮೇಲೆ ಭದ್ರಾನದಿಯಿದೆ. ಆಚೇ ದಂಡೆಯಲ್ಲಿಯೇ ಹಲಸೂರು. ಹೊನ್ನೇರಿಯಿಂದ ಸುಮಾರು ಅರ್ಧ ಮೈಲು ಬಂದಿರಬಹುದು, ಕತ್ತಲೆಯಾಯಿತು. ಸಪ್ತಮಿಯ ಚಂದ್ರನು ಪ್ರಕಾಶಿಸಹತ್ತಿದನು. ಆಗಾಗ್ಗೆ ಮೋಡಗಳು ಕವಿದು ಅವನ ಪ್ರಕಾಶಕ್ಕೆ

ಕುಂದು ತರುತ್ತಿದ್ದವು. ಯಾವಾಗಲೂ ವಿದ್ಯುದ್ದೀಪದಲ್ಲಿರುವ ನನಗೆ ದಾರಿಯು ಸ್ಪಷ್ಟವಾಗಿ ತೋರದಾಯಿತು. ಅಲ್ಲಲ್ಲಿ, ಕೆಸರಲ್ಲಿ ಎಡವುತ್ತ ಮುಗ್ಗರಿಸುತ್ತ ನಡೆಯುತ್ತಿರುವದನ್ನು ನೋಡಿ ಸಿದ್ದನಿಗೆ ಖೇದ ವಾಯಿತು.

"ಸಾಮಿ ನಂದೊಂದು ಮಾತು ಕೇಳ್ತೀರಾ?" ಸಿದ್ದನೆಂದ.

"ಒಂದೇ ಮಾತು ಯಾತಕಯ್ಯ, ದಾರಿಯುದ್ದಕ್ಕೂ ಹೇಳ್ತಾನೇ ಇರು." ತಿರಸ್ಕಾರದಿಂದ ನಾನು ನುಡಿದೆ.

"ನೀವು ಹೀಗೇನೆ ನಡ್ಕೊಂಡು ಬಂದ್ರೆ ಪೂರಾ ಹೊತ್ತು ಆಗ ತೇತ್ರಿ; ಈ ಕೋಣದ ಮೇಲೆ ಹತ್ರಿ. ನಿಮ್ಮ ಮನಸ್ಸಿಗೆ, ಕೋಣದ ಮೇಲೆ ಹೆತ್ತೋಕೆ ನಾಚಿಕೆಯಿದ್ದರೆ, ನನ್ನ ಹೆಗಲು ಮೇಲೆನಾದ್ರೂ ಕುಂತಕೊಳ್ಳಿ. ನೀವು ದಾರ್ಯಾಗ ಬೀಳೋದೇಳೋದು ನೋಡಿ ನನ್ನ ಜೀವಕ್ಕ ಮುಳ್ಳು ಚುಚ್ಚಿದಾಂಗಾಗ್ತೈತೀ ಬುದ್ಧೀ." ಎಂದು ಬಹಳ ಕರುಣಾವಾಣಿಯಿಂದ ನಮ್ಮ ಸಿದ್ದನೆಂದ.

ವೈದ್ಯರು ಹೇಳಿದುದೂ ಹಾಲನ್ನ, ರೋಗಿ ಬಯಸಿದುದೂ ಹಾಲನ್ನ, ಎಂಬ ಗಾದೆಯಂತೆ ಸಿದ್ದನ ಯೋಚನೆಯು ನನಗೆ ಸಮ ರ್ಪಕವಾಗಿ ತೋರಿತು. ಹುರುಳಿಲ್ಲದ ನಾಚಿಕೆಯಿಂದ ಏನು ಪ್ರಯೋಜನ? ಕತ್ತಲಾದ್ದರಿಂದ, ಕೋಣನ ಮೇಲೆ ಕುಳಿತುಕೊಂಡು ಹೋಗುವದು ಸರಿಯೆನಿಸಿತು. ಕೋಣವನ್ನು ನಿಲ್ಲಿಸಿ ಸಿದ್ದನ ಸಹಾ ಯದಿಂದ, ಅದನ್ನೇರಿ ಕುಳಿತೆ. ಸಿದ್ದನು ಕೋಣವನ್ನು ಸಾಗಿಸ ತೊಡಗಿದನು. ಆಗಾಗ್ಗೆ ಅದನ್ನು ಕೈಲಿರುವ ಚಬಕದಿಂದ ಹೊಡೆ ಯುತ್ತಿದ್ದನು; ಕೋಣವು ತನ್ನ ರಾಡಿಬಾಲದಿಂದ ನನ್ನನ್ನು ಹೊಡೆ ಯುತ್ತಿತ್ತು.

ಇಂಥ ಸಡಗರದಿಂದ ಶ್ವಶುರ ಗೃಹಕ್ಕೆ ಹೊರಟಿರುವ ನನಗೆ ಈಗ್ಗೆ ಆರು ವರ್ಷಗಳ ಹಿಂದೆ ಪತ್ನಿಸಮೇತನಾಗಿ ಕುದುರೆಯನ್ನೇರಿ ಮಂಗಲ ವಾದ್ಯದೊಡನೆ ಶ್ವಶುರ ಗೃಹದಿಂದ ನಮ್ಮ ಮನೆಗೆ ಹೊರಟ ನೆನಪು ಆಗದಿರಲಿಲ್ಲ.

ಈ ಪ್ರಕಾರ ಮಾರ್ಗಕ್ರಮಣ ಮಾಡುತ್ತ ಭದ್ರೆಯ ತೀರಕೆ ೭॥ ಘಂಟೆಗೆ ಬಂದು ತಲುಪಿದೆವು. ಆಚೇ ತೀರದಲ್ಲಿ ಹಲಸೂರ ಕಾಣಿಸುತ್ತಿತ್ತು. ಮನಸ್ಸಿಗೆ ಒಂದು ಬಗೆಯ ಸಮಾಧಾನವಾಯಿತು. ಮೋಡಗಳು ಚದರಿ ಚಂದ್ರಪ್ರಕಾಶಕ್ಕೆ ಅವಕಾಶವಾಯಿತು. ತುಂಬಿ ಹರಿಯುವ ಭದ್ರೆಯ ಮೇಲೆ ಚಂದ್ರಪ್ರಕಾಶವು ಬಿದ್ದು, ಸುತ್ತು ಮುತ್ತಲಿನ ಆ ಮಲೆನಾಡಿನ ಸೃಷ್ಟಿಸೌಂದರ್ಯವು ನನಗೆ ಆನಂದ ವನ್ನುಂಟುಮಾಡದಿರಲಿಲ್ಲ. ತೆಂಗು ಅಡಿಕೆ ಮೊದಲಾದ ನಿತ್ಯೋಪ ಯೋಗಿ ವಸ್ತುಗಳನ್ನೂ ಹಲಸು ಮಾವು ಮೊದಲಾದ ಫಲಗಳನ್ನೂ ನಿರ್ವಂಚನೆಯಿಂದ ಕೊಡುವ ಈ ಮಲೆನಾಡಿನ ಸೃಷ್ಟಿಸೌಂದರ್ಯದ ಹಾನಿಗೆ-ಕುರೂಪಕ್ಕೆ-ಈ ಹಳ್ಳಿಯ ಜನರ ಹುಂಬತನವೇ ಅಶಿಕ್ಷಿತ ತೆಯೇ ಕಾರಣವೆಂದು ತೋರಿತು. ಇಂಥ ಜನರಿಗೆ ಸನ್ಮಾರ್ಗದರ್ಶಕ ರಾಗುವದೂ, ಸುಶಿಕ್ಷಿತರನ್ನಾಗಿ ಮಾಡುವದೂ, ಸಮಸ್ತ ಫಲಗಳಿಂದ ಗುಣಗಳಿಂದೊಡಗೂಡಿದ ಈ ಮಲೆನಾಡನ್ನುದ್ಧರಿಸುವದೂ, ನಮ್ಮಂಥ ತರುಣರ ಕರ್ತವ್ಯವಲ್ಲವೇ ? ಎಂಬ ಪ್ರಶ್ನೆಯು ನನ್ನೆದುರಿಗೆ ದೂತ್ತಾಗಿ ನಿಂತಿತು. ಈ ಬಗೆಯಿಂದ ಯೋಚಿಸುತ್ತಿರುವಾಗ ಘಂಟೆಯೆಂಟಾಯ್ತು. ಒಂಬತ್ತಾಯಿತು. ಆಚೇ ತೀರದಲ್ಲಿರುವ ಹರಗೋಲನ್ನು ಯಾರೂ ಈಚೆಗೆ ತೆಗೆದುಕೊಂಡು ಬರಲೇ ಇಲ್ಲ. ನಮ್ಮ ಸಿದ್ದನು ನನ್ನನ್ನು ಹರಗೋಲಿನಲ್ಲಿ ಕೂಡ್ರಿಸಿ ತಿರಿಗಿ ಬಿದಿರಿಗೆ ಹೋಗಬೇಕೆಂದು ಹಾತೊರೆ ಯುತ್ತಿದ್ದನು. ಬೆಳಗಿನಿಂದ ನನಗೆ ಅನ್ನವಿಲ್ಲದ್ದರಿಂದ ಕ್ಷುಧೆಯು ನನ್ನನ್ನು ಬಾಧಿಸತೊಡಗಿತು. ಇನ್ನು ಎದುರಿಗೆ ಕಾಣುವ ಹಲಸೂರು ಸೇರುವದು ಹೇಗೆಂದು ಯೋಚನೆಯಲ್ಲಿ ನಿಮಗ್ನನಾದೆನು.

ಅಷ್ಟರಲ್ಲಿ ನದಿಯ ಆಚೇ ತೀರದಲ್ಲಿ ಯಾರೋ ಇಬ್ಬರು ಹರ ಗೋಲಿನ ಕಡೆಗೆ ಬರುವಂತೆ ಕಾಣಿಸಿತು. ಸಿದ್ದನು ಹರಗೋಲನ್ನು ನಾವಿರುವ ತೀರಕ್ಕೆ ಜಾಗ್ರತೆಯಾಗಿ ಸಾಗಿಸಿಕೊಂಡು ಬನ್ನಿರೆಂದು ಜೋರಾಗಿ ಕೂಗಿ ಹೇಳಿದನು. ಕ್ರಮೇಣ ಆ ಎರಡು ವ್ಯಕ್ತಿಗಳು ಹರಗೋಲನ್ನು ಬಿಚ್ಚಿ ನದಿಯ ಪ್ರವಾಹದ ವಿರುದ್ಧ ದಿಕ್ಕಿಗೆ ಒಂದು

ಫರ್ಲಾಂಗಿನಷ್ಟು ದೂರ, ದಂಡೆಗುಂಟ ಎಳೆದುಕೊಂಡು ಹೋದವು. ಇಬ್ಬರೂ ಹರಗೋಲನ್ನೇರಿ. ಕೈಯಲ್ಲಿರುವ ಗಣಿಯ (ಉದ್ದನ್ನ ಗಳ) ಸಹಾಯದಿಂದ ಅದನ್ನು ನದಿಯ ಪ್ರವಾಹಕ್ಕೆ ತಳ್ಳಿಕೊಂಡರು. ಐದೆಂದರೆ ಐದೇ ನಿಮಿಷದಲ್ಲಿ, ನಾವಿರುವ ದಂಡೆಗೆ ಹರಗೋಲು ತಲುಪಿತು. ಆ ಅಂಬಿಗರ ಹುಟ್ಟುಹಾಕುವ ನಿಪುಣತೆಯನ್ನು ಕಂಡು ಬೆರಗಾದೆನು.

"ಚೀ! ನಿಮ್ಮ ಮನೆ ಹಾಳಾಗಾ! ನಿಮಗಂತೆ ಎಷ್ಟಲೋ ದಾರೀ ಕಾಯೋದು, ಅಲ್ಲಾ ಕಾಣೋ ಆ ಬೈರಣ್ಣ ಯಾತ್ಕೆ ಬರಲಿಲ್ಲಾ? ಅವನ್ದು ತಾನೇ ಈ ವರ್ಸಾ ಗುತ್ತಿಗಿ?'' ಸಿದ್ದನೆಂದ.

"ಏನು ಕೇಳಿಯಾ ಸಿದ್ದಣ್ಣ ಆ ಬೈರಣ್ಣನ ಪಾಡನಾ. ಯರಡನೆ ಯವ್ರ ಬಾಯ್ಗೆ ಮಣ್ಣಾಕೆ, ಈಗ ಮೂರು ವರ್ಷದಿಂದಲೂವೆ ಅವನೇ ತಗಾಂದಿದ್ದಾನೆ ಗುತಿಗೀನಾ. ಅಂಗಂತ್ಲೆ ಸ್ವಾಮಿ ಈಸಲ ಅವನ್ನೂ ಕಾಯಿಲೆ ಕೆಡವಿ, ನೆಲಕಟ್ಟಸ್ಯಾವ್ನೆ'' ಅಂಬಿಗನೆಂದ.

"ಹೌದು, ಕಣ್ಣೆ ಹೊಳೆ ಅಮಿಲ್ಲಾರತನ, ತನಗೇ ಐಂತಿ ಅಂತ ಪೂರಾ ಜರ್ದಾ ಅವನಿಗೆ. ಮೊನ್ನೆ ನಮ್ಹುಡುಗನಿಗೆ, ಭದ್ರಾವತೀ ಸಂತೆಗೆ ಬೆಲ್ಲ ಕೊಟ್ಟು ಕಳಿಸಿದ್ದೆ ಮಾರೋದ್ಕೆ. ಆ ಕೋತೀ ಮಗನು ಹೊಳೆ ತಡಾಯ್ಸಿದ ವ್ಯಾಗೆ–೬ ಬಂಡೆ ಬೆಲ್ಲತಕ್ಕೊಂಡಾ ನನ್ನ ಮಗನ ಕಡಿಸಿಂದಾ''

"ಹೌದು ಸಿದ್ದಣ್ಣ, ಒಳ್ಳೆ ದೊರೆತನ ಬಂದಾಂಗೆ ಮಾಡತಾವ್ನೆ. ತಮ್ಮೂರೊರ್ನ ನೋಡೋಕಿಲ್ಲ, ಕೇರ್ಯೋರ್ನ ನೋಡೋಕಿಲ್ಲ. ಇರ್ಲಿ. ನಾವೂ ನೋಡಾನೇ ಒಂದು ಕೈ, ಕೊಡ್ತಿವ್ನೀ ಅವನ್ಗೆ.''

"ಚಿ! ಜೊಕಮಾರಾ! ಅವನಿಗೆ ಕೈ ಕೊಡೋನಾ ಇಂಥಾ ಹೊತ್ನ್ಯಾಗೆ, ಯಾತ್ಕೆ ಆವನ ಕೆಲಸಗೇಡಿಯಾ''

"ನಮಿಗೂ, ಅವ್ನಿಗೂ ಎಷ್ಟು ದ್ವೇಸ ಇದ್ದರೂವೆ–ದೊಡ್ಡೋರ ಮಾತು ಮೀರೊದ್ಕಾದೀತೆ ಸಿದ್ದಣ್ಣ. ಸಾವುಕಾರ್ರು ನಂಜಪ್ಪನೋರು, ಬೆಂಗಳೂರಲಿದ್ದಾ ಯಾರೋ ತಮ್ಮ ನೆಂಟ್ರು ಬಂದು ಹಾದೀ ಕಾಯುತ್ತ

ಇವ್ರು, ಆವರ್ನ ಹೊಳೆ ದಾಟಿಸ್ಕೊಂಡು ಬಾ ತಂತ ಹೇಳಿದ್ರು, ಅಂತಾ ಬಂದೇ ಕಣವ್ರೋ. ಪೂರಾ ಹೊತ್ನಾಗ್ಯೆಗ ನೆರವಾಗೊವ್ರು ಮಾರಾಯ್ರು''

''ಹೌದು ಕಣೋ, ಇವ್ರು ಸಾಮಿಗಳು, ಬೆಂಗಳೂರಲಿದ್ದಾ ಬಂದಾವ್ರೆ, ಪಾಪ ನಿನ್ನೆಯಿಂದ ಉಪವಾಸ. ಭರೀನೆ ಹೊಳೆ ತಡಾಯ್ತು ಆವರ್ನ ಮನೆ ಸೇರಿಸಿಬಿಡು" ಎಂದು, ಕೊಣನ ಮೇಲೆ ಹೇರಿದ, ಸಾಮಾ ನನ್ನೆಲ್ಲ, ಸಿದ್ದ ಹರಗೋಲಿನಲ್ಲಿಟ್ಟನು.

"ಯಾಕಲಪ್ಪಣ್ಣ, ಕೋಣನ ಮೇಲ್ಹೇರಿವೆ ಸ್ವಾಮಾನು-ಗಾಡೀಲಿ ಕುಂದ್ರಿಸಿಗೊಂಡು ಬರೋಕಿಲ್ಲವೇ ರಾಯರ್ನ'' ಅಂಬಿಗನೆಂದ.

"ಅದೇ ಕಣೀಯಾ'' ಸಿದ್ದನು ಕೈ ಮಾಡಿ "ಕೆಂಪರಾಮು, (ಜೊತೆ ಎತ್ತಿನ ಹೆಸರು) ಎಲ್ಯೊ ತಪ್ಪಿಸಿಕೊಂಡು ಬಿಟ್ಟಿತು. ಕಡಿಗೆ ಒಡ್ಡರ ಗಂಗಪ್ಪನ ತಾವು, ನಾಳೀ ದಿನ ಬೆಳಗ್ಗೆ, ವಾಪಸ ಹೊಡಕೊಂಡು ಬತ್ತೀನಿ ಅಂತಾ ಹೇಳಿ ತಂದೆ ಈ ಕೋಣವಾ. ಹೊನ್ನೇರಿಗೆ ಬರೋ ಹೊತ್ತಿಗೆ, ಚಕ್ರದ ಹಳಿ ಕಳಚಿಬಿತ್ತು ಅಂತಾ, ಗಾಡೀ ಎತ್ತು ಅಲ್ಲೇ ಬಿಟ್ಟು ಈ ರಾಯರ್ನ ಕೋಣದ ಮೇಲೆ ಕುಂದ್ರಿಸಿಗೊಂಡು ಬಂದೆ" ಸಿದ್ದನೆಂದ.

ಅಂಬಿಗರಿಬ್ಬರೂ ನಾನು ಮಹಿಷಾರೋಹಿಯಾಗಿದ್ದು ಕೇಳಿ ಕೊಳ್ಳನೇ ನಕ್ಕರು. ನನ್ನ ಮನಸ್ಸಿಗೆ ಹುಳ ಕಡಿದಂತೆ ಆಯಿತು. ಸುಮ್ಮನೆ ತಲೆಹರಟೆಯಾಡುವ ಸಿದ್ದನ ಮೇಲೆ ಮನಸ್ಸಿನಲ್ಲಿ ಪೂರಾ ರೇಗಿದೆನು. ಅಂತೂ, ಸಿದ್ದನು ಸಾಮಾನ್ನೆಲ್ಲ ಹರಗೋಲಿನಲ್ಲಿಟ್ಟು ಹೊರಡಲನುವಾಗಿ, ಕೈ ಮುಗಿದುಕೊಂಡು ನಿಂತನು. ೧ ರೂಪಾಯಿ ತೆಗೆದು ಆವನ ಕೈಗಿಟ್ಟೆ. ಸಿದ್ದನು ಮರುಮಾತಾಡದೆ ನೆಲ ಮುಟ್ಟಿ ನಮಸ್ಕಾರ ಮಾಡಿ, ಕೋಣವನ್ನೇರಿ, ಬಿದಿರೆಯ ಹಾದೀ ಹಿಡಿದನು.

ಅಂಬಿಗರು ನನ್ನನ್ನು ಹರಗೋಲಿನಲ್ಲಿ ಕುಳ್ಳಿರಿಸಿ, ಮೊದಲಿ ನಂತೇ ಪ್ರವಾಹದ ವಿರುದ್ಧ ದಿಕ್ಕಿಗೆ ಎರಡು ಫರ್ಲಾಂಗು, ದಂಡೆಗುಂಟ ಎಳೆದುಕೊಂಡು ಹೋಗಿ, ಹರಗೋಲನ್ನು ಒಂದು ಗಿಡಕ್ಕೆ ಕಟ್ಟಿ,

ತಾವೂ ಹರಗೋಲೇರಿದರು. ಮಧ್ಯದಲ್ಲಿ, ನಾನು ಕುಳಿತಿದ್ದೆನು, ಒಂದು ಕಡೆ ಒಬ್ಬ ಅಂಬಿಗ, ಮತ್ತೊಂದು ಪಕ್ಕಕ್ಕೆ ಮತ್ತೊಬ್ಬಂಬಿಗನು ಗಣೆಯನ್ನು, ಕೈಯಲ್ಲಿರಿಸಿಕೊಂಡಿದ್ದರು.

ಸ್ವಲ್ಪ ಹೊತ್ತಿನ ವರೆಗೆ ಎಲ್ಲರೂ ಸುಮ್ಮನಿದ್ದೆವು. ಹರಗೋಲನ್ನು ಸೆಳವಿಗೆ, ಹಾಕಿರಲಿಲ್ಲ.

"ರಾಯರೆ'' ಅಂಬಿಗನೆಂದ.

"ಏನಪ್ಪ'' ನಾನೆಂದೆ.

"ನಾವು ಯಾರು ಗೊತ್ತೋ? ಸ್ವಾಮಿ'' ಅಂಬಿಗನೆಂದ.

"ಅಂಬಿಗರಲ್ಲವೆ?'' ಸ್ವಲ್ಪ ಸಾಶಂಕ ದೃಷ್ಟಿಯಿಂದ ಅಂಬಿಗನನ್ನು ನೋಡಿ ನಾನೆಂದೆ.

"ಹೊಳೆ ದಾಟದ ಮೇಲೆ ನೀವು, ನಮ್ಮ, ಮಿಂಡರಲ್ಲವೇ?'' ಕಣ್ಣು ಮಿಚಿಕಿ, ನಸುನಗುತ್ತ ಅಂಬಿಗನೆಂದ.

"ಮಿಂಡರಾದಾಕ್ಷಣಕ್ಕೆ, ದುಡ್ಡು ಕೊಡುವದು ತಪ್ಪಿಲ್ಲವಲ್ಲ" ನಾನೆಂದೆ.

"ಆದಿರಲಿ ಬಿಡಿ'' ಮಾತು ತಿರಿಗಿಸಿ "ನಿಮ್ಮ ಕೈ ಗಡಿಯಾರದಲ್ಲಿ, ಗಂಟೆಯಷ್ಟಾಗಿದೆ ಸ್ವಾಮಿ" ಅಂಬಿಗನೆಂದ.

"ಹತ್ತು ಗಂಟೆಯಾಗಿದೆಯಪ್ಪ" ನಾನೆಂದೆ.

"ಸ್ವಾಮಿ ತಮ್ಮ ಕೈಗಡಿಯಾರವನ್ನು ನನ್ನ ಕೈಗೆ ರವಷ್ಟು ಕಟ್ಟಿ ಸಾಮಿ'' ಅಂಬಿಗನು ಕೈ ಮುಂದೆ ಚಾಚಿ ನುಡಿದನು.

''ಬೇಡವಯ್ಯಾ. ಘಡಿಯಾಳ ಬಹಳ ಸೂಕ್ಷ್ಮ. ಹುಟ್ಟು ಹಾಕ ಬೇಕಾದರೆ ಕೆಟ್ಹೋಗಿಬಿಟ್ಟೀತು" ನಾನೆಂದೆ.

"ಓ ಬಿಡಿ ಸ್ವಾಮಿ, ನಾವೇನು ಕಾಣವೇನು ಕೈಘಡಿಯಾರಾನ. ಕೈಯಲ್ಲಿ ಕಟ್ಟಿ ಸಾಮಿ ನೋಡಾಣೇ'' ಅಂಬಿಗನು ಘಟ್ಟಿಯಾಗಿಯೇ ಅಂದನು. ಇದೆಲ್ಲಿಯ ಪೀಕಲಾಟವೆಂದು ಕೈ ಗಡಿಯಾರ ಬಿಚ್ಚಿ

ಅಂಬಿಗನ ಕೈಗಿತ್ತೆ. ಅವನು ಅದನ್ನು ತನ್ನ ಕೈಗೆ ಕಟ್ಟಿಕೊಂಡನು. ಹೊಳೆ ದಾಟಿದರೆ, ವಾಪಸು ಕೊಡಬಹುದೆಂದು ತಿಳಿದುಕೊಂಡೆ.

"ಸ್ವಾಮಿ ಆ ಹಾಸಿಕೆ ಸುಳ್ಳೀ ಒಳಿಕೆ ಏನೇನೈಂತೆ?'' ಉತ್ಸುರತೆಯಿಂದ. ಅಂಬಿಗನೆಂದ.

"ಯಾಕಪ್ಪ, ಅದರ ಪಂಚಾಯಿತಿ ನಿನಗೆ!'' ನಾನು ಗಾಬರಿಯಿಂದೆಂದೆ.

''ತೆಗಿರಿ ಸಾಮಿ ಸುಮ್ಮಕೆ ಏನೈತೆ ನೋಡಾನಾ'' ಗದ್ದರಿಸಿ ಅಂಬಿಗನೆಂದ.

"ಆಗದು ಕಾಣಯ್ಯಾ, ಹಾಸಿಗೆ ಬಿಚ್ಚಿ ತಿರುಗಿ ಕಟ್ಟುವರ್‍ಯಾರು?'' ನಾನೆಂದೆ

"ತಿರುಗಿ ಕೊಟ್ಟ್ರೋದೇ ಬೇಕಿಲ್ಲ" ಅಂಬಿಗನೆಂದ.

ನಿರ್ವಾಹವಿಲ್ಲದೆ ಬಿಚ್ಚಿ ತೋರಿಸಿದೆ. ಸೂಟಕೇಶಿನಲ್ಲಿ ಸ್ಥಳವಿರದ್ದರಿಂದ, ನನ್ನ ಪತ್ನಿಗೋಸ್ಕರ ತೆಗೆದ ಎರಡು ಅರಳೀಪೇಟೆಯ ರೇಶ್ಮೆ ಅಂಚಿನ ಸೀರೆಗಳು ಅದರಲ್ಲಿದ್ದವು.

''ಸಾಮಿ ನನ್ನ ಹೆಂಡತಿ ಇದುವರೆಗೂ ಇಂಥ ಸೀರೆ ಉಟ್ಟಿಲ್ಲ, ನಾನು ಬಡವ, ನಿಮ್ಮ ಹೆಸರು ಹೇಳಿ ಅವಳು ಈ ಸೀರೆನಾ ಉಡತಾವ್ಳೆ ಕೊಟ್ಟು ಬಿಡಿ. ನನ್ನ ಮಗ, ಜಾವಣ ಬಹಳ ಕಾಯಿಲೆಯಿಂದ ಇವನೆ. ಅವನಿಗೆ ಹೊತಗೊಣ್ಣೋಕೆ ಈ ನೂಪೆ (ಕಂಬಳಿ=ರಗ್ಗು) ಕೊಟ್ಟು ಬಿಡಿ ಸ್ವಾಮಿ'' ಅಂಬಿಗನೆಂದ.

"ನ್ಯಾಯ ಅಂದರೆ ಸ್ವತಃ ಕಷ್ಟಪಟ್ಟು ಸಂಪಾದಿಸಿಕೋಬೇಕಾದ್ದು. ಕಳ್ಳತನ ದರೋಡೆ ಮಾಡದೆ, ಒಳ್ಳೇ ಮಾರ್ಗದಿಂದ ಸಂಪಾದಿಸಿಕೋ ಬೇಕಾದ್ದು'' ಸ್ವಲ್ಪ ಧೈರ್ಯವಾಗಿ ನಾನೆಂದೆ.

"ನಾವು ದರೋಡೆ ಏನೂ ಮಾಡಿಲ್ಲವೇ, ಸಾಮಿ, ನಿಮ್ಮ ಪಾದಾ ಮುಟ್ಟಿ ಸಲಾಂ ಹಾಕಿ ಆ ಸೀರೆ ನೂಪೆ ನಮಿಗೆ ಕೊಡಿ, ಅಂತಾ ಕೇಳಕೊಂತೀವಿ'' ಅಂಬಿಗನೆಂದ.

"ಸರಿ, ನಾನೊಬ್ಬಂಟಿಗನಾಗಿ, ಈ ಹರಗೊಲ್ನೆಲ್ಲಿ, ಇಂಥಾ ರಾತ್ರಿ ಹೊತ್ನಲ್ಲಿ ಸಿಕ್ಕಿದ್ದರಿಂದ, ಇಂಥಾ ಭಾರೀ ಬೆಲಿಯ ಸಾಮಾನು ಕೇಳ ತೀರಾ! ನಾಲ್ಕು ಜನರಲ್ಲಿ ನಿಮಗೆ ಇಷ್ಟು ಧೈರ್ಯವಾಗಿ ಕೇಳೊದ್ಕಾ ದೀತೇ?" ಸ್ವಲ್ಪ ಜಾಸ್ತೀ ಧೈರ್ಯದಿಂದ ನಾನೆಂದೆ.

"ಸ್ವಾಮೇರೆ ಇಂತಾ ಗಡಿಯಾರಾ ಕೈಗೆ ಕಟಿಗೊಣ್ಣೋದು, ನಮ್ಮ ಹೆಂಡ್ರು ಇಂತಾ ಅಂಚಿನ ಸೀರೆ ಉಡೋದು, ನಮ್ಮ ಮಕ್ಕಳು ಇಂತಾ ಮಳಿಗಾಲದ ಮಲ್ಲಾಡಿನಾಗೆ ಮೈತುಂಬ ಬೆಚ್ಚಗನೀ ಕಂಬಳೀ ಹೊತಗೊಂಬೋದು, ದೇವರು ನಮ್ಮ ಹಣ್ಯಾಗ, ನಮ್ಮ ಹೆಂಡ್ರ ಹಣ್ಯಾಗ, ನಮ್ಮ ಮಕ್ಳು ಮಮ್ಮೊಕ್ಕು ಮರಿಮಕ್ಳು ಹಣ್ಯಾಗ ಕೂಡಾ, ಬರೀಲಿಲ್ಲವಲ್ಲ ಬುದ್ಧಿ?" ಅಂಬಿಗನೆಂದ.

"ದೇವರೇನು, ಮಾಡತಾನಯ್ಯ ಅದಕೆ? ನೀವು ಸರಿಯಾಗಿ ಕಷ್ಟಪಟ್ರೆ, ಸಾಕಷ್ಟು ವಿದ್ಯಾ ಬುದ್ಧೀ ಕಲ್ತು ಮುಂದಕೆ ಬಂದ್ರೆ, ಒಳ್ಳೆದಾರಿಗೆ ಬರತೀರಾ. ಆವಾಗ, ನಮಗಿಂತಲೂ ನೀವು ಸುಖವಾಗಿರ ಬಹುದು" ಗಂಭೀರವಾಗಿ ಉಪದೇಶಕಸ್ವರದಿಂದ ನಾನೆಂದೆ.

"ಉ! ಬುದ್ದಿ, ನಿವೂ ಕೂಡಾ ಈಗ ಸರಿಯಾದ ದಾರಿಗೆ ಬಂದ್ರಿ. ನಂದೊಂದು ಮಾತು ಕೇಳ್ರಿ ಬುದ್ಧೀ! ನಮ್ಮಂಥ ಅಂಬಿಗರು, ಹಳ್ಳಿ ಜನರು, ಹುಂಬ ಒಕ್ಕಲಿಗೇರು ಕಷ್ಟ ಪಡೋದಕ್ಕೆ ಎಂದೂ ಹೆದ್ರೋ ರಲ್ಲ. ವಿದ್ಯಾ ಬುದ್ಧಿ ಕಲ್ತು ನಿಮ್ಮಾಂಗೇನೆ ಒಳ್ಳೇ ದಾರ್ಲಿ ಹೋಗಿ ಸುಖ ಪಡಬೇಕಂತ, ನಮಬ್ಬೊಬ್ಬರ ಮನಸ್ಸಿನಲ್ಲೂ ಐತೆ. ಆದ್ರೆ ನೀವು ಕಷ್ಟ ಪಡೂದು ಸರಿಗಿಲ್ರೋ, ನಿಮ್ಮದು ತಪ್ಪು ಇಂತಲ್ಲಿ ಆಗ್ತೈತೆ ಕಾಣ್ರ್ಯೋ, ಆ ತಪ್ಪ ಇಂತಾ ರೀತೀಲಿ ಸುದಾರಿಸಿಕೊಳ್ರ್ಯೋ ಬೊಡ್ಡಿ ಮಕ್ಕಳಾ" ಅಂತ ಹೇಳಿಕೊಟ್ಟು, ಅವರ್ನ ಸರಿಯಾದ್ದಾರಿಗೆ ಕರಕಂಡ್ಹೋಗೂರು ನಿಮ್ಮಂತವ್ರು ಒಬ್ಬರು ಇರಬೇಕಲ್ಲವೇ ಬುದ್ಧೀ? ನಿಮ್ಮಂಥಾ ಕಲ್ತವರೂ ನ್ಯಾಯವಾಗಿ ನಡಿಯೋರೂ, ಬೆಂಗಳೂರ ಬೊಂಬಾ ಯಿಯಂತ ಸಹರಾ ತುಂಬಿಕೊಂಡುಬಿಟ್ರೆ ಕನಡಾ (Lower Seconday) ಲೊಅರ ಸೆಕಂಡ್ರಿ ಪ್ಯಾಸು ಮಾಡಿ ಬರೋ,ಮೇಸ್ಟ್ರೆಲ್ಲಾ

ನಮ್ಮ ಹಳ್ಳಿ ಮಕ್ಕಳಿಗೆಲ್ಲಾ, ಓ ನಾ ಮಾ ಸ್ವೇ ಕಲ್ಸಿ ಹೊಟ್ಟೆ ತುಂಬಿಕೊಂಡು ಹೊಗ್ತಾರೆ, ಹೊರ್ತು ನಿಮ್ಮಂತಾ ಸುಖಾಕಾಣೊ ದಾರಿಗೆ ಹಚ್ಚೊ ಬುದ್ದಿ ಅವ್ರಿಗಿನ್ನೂ ಇಲ್ಲಾ. ಇನ್ನು ಮುಂದೂ ಹೀಗೇ ನಡದ್ರೆ ದೇವರು ನಮ್ಮ ಹಣ್ಯಾಗೆ, ಈ ಹುಟ್ಟು ಹಾಕೋ ದಷ್ಟೆ ಬರ್ದವನೆ, ನಿಮ್ಮಂತೆ ಸುಖಪಡೋದು ಬರದೇಯಿಲ್ಲಾ, ಅಂತಾ ಅನಸ್ತೇತೆ? ಈ ಹಳ್ಳಿ, ಹೊಲ, ಹೋರಿ, ಹರಗೋಲು ಎಲ್ಲ ಬಿಟ್ಟು, ನಿಮ್ಮತಾಗೆ ಬೆಂಗಳೂರು ಬೊಂಬಾಯಿಗೆ, ಬರೊದ್ಯಾಕದೀತೆ ಬುದ್ಧಿ? ಅದ್ಕಂತೇ ನಿಮ್ಮಂತೆ ಸಾಮೇರು, ಅಪ್ಪಿ ತಪ್ಪಿ ಇಂತಾ ಮಳಿಗಾಲಾ ಗಿನ ಮಲ್ಲಾಡ್ದಾಗೆ–ಇಂತಾ ರಾತ್ರಿ ಹರಗೋಲ್ನ್ಯಾಗೆ– ಸಿಕ್ಕ ಬಿದ್ರೆ ನಿಮ್ಮ ತಾವು ಇರೋ ಈ ಗಡಿಯಾರ, ಈ ಸೀರೆ, ರಗ್ಗು ವಸ್ತ ಒಡವೆ ರುಪಾಯಿ ಎಲ್ಲ, ಸೆದಿ ಬಡಿಬೇಕು, ದೇವ್ರು ಹಣೇಲಿ ಬರೀದೇ ಇರೋ ದ್ನೆಲ್ಲಾ ಇಂತಾ ಬಟ್ಟೆ ಬರೆ ತೊಟ್ಟು, ವಸ್ತ್ರಾವಡವೆ ಇಟ್ಟು, ಸುಖ ಪಡಾಣ ಅನಸ್ತೇತೆ ಬುದ್ಧಿ! ಅದಕ್ಕೇ ಈ ತರಕಾರೀ ಬುಟ್ಟೀ ಒಂದು ಬಿಟ್ಟು, ಬಾಕೀ ಎಲ್ಲಾನೂವೆ, ಇಲ್ಲಿ ನಮಗೆ ಬಿಟ್ಹೋದ್ರೀ ನಿಮಗೆ ಆಚೀ ದಂಡೆಗೆ ತಲ್ಪಿಸತ್ತೀವಿ. ಇಲ್ದೆ ಹೋದ್ರೆ, ನಿಮ್ಮ ನಡು ವಿಗೆ ಒಂದು ಕಲ್ಲು ಕಟ್ಟೆ ಈ ಹೊಳೀ ಪಾಲ್ ಮಾಡಬಿಡತೀವಿ'' ಎಂದು ಮರ್ಮಭೇದಕ ದೃಷ್ಟಿಯಿಂದ ನೋಡಿ, ಅಂಬಿಗನೆಂದನು.

ನಿಜ ಪ್ರಕಾರವು ನನ್ನ ಬುದ್ಧಿಗೆ ಹೊಳೆಯಿತು. ನಾನು ದರೋ ಡೆಖೋರರ ಕೈಲಿ ಸಿಕ್ಕಿರುತ್ತೇನೆಂಬದು ಗೊತ್ತಾಯಿತು. "ನಿಮ್ಮ ನಡು ವಿಗೆ ಕಲ್ಲು ಕಟ್ಟೆ ಹೊಳೆಪಾಲು'' ಎಂಬ ಶಬ್ದಗಳು ಕಿವಿಗೆ ಬಿದ್ದ ಕೂಡಲೇ, ನನ್ನ ಎದೆಯೊಡೆದು ನೀರಾಯ್ತು. ಕೇವಲ ನನ್ನ ಹತ್ತಿರ ವಿರುವ ಹಣ, ವಸ್ತುಗಳ ಅಪಹಾರಕ್ಕಾಗಿ, ಜೀವವನ್ನೇ ತೆಗೆಯುವ ಈ ಕ್ರೂರ ಅಂಬಿಗರ ಕೈಯಿಂದ ಪಾರಾಗುವ ಉಪಾಯವನ್ನು ಯೋಚಿ ಸಲಾರಂಭಿಸಿದೆ.

''ಏನಯ್ಯ, ಈ ರಗ್ಗು, ಸೀರೆ, ಕೈಗಡಿಯಾರ ಇವುಗಳಿಗಾಗಿ ಇಷ್ಟು ರಾಮಾಯಣವೇ? ಅವನ್ನೆಲ್ಲ ನಾನೇ ಖುಸಿಯಿಂದ ಕೊಡುತ್ತೇನೆ,

ಪುತ್ತೇನು ? ಆಚೇ ದಂಡೆಗೆ ಜಾಗ್ರತೆ ತಲ್ಪಿಸಿ. ಇಲ್ದಿದ್ರೆ ಹೊದ್ರೆ, ನೀವು ನೀರಿನಲ್ಲಿ ಮುಳಗಿಸಿ ಕೊಲ್ಲೋಕಿಂತ ಮೊದ್ಲೆ ನಾನು ಹಸಿವೆಯಿಂದ ಸಾಯ್ತಾ ಇದ್ದೇನಿ'' ನಿಸ್ಪೃಹವಾಗಿ ನಾನೆಂದೆ.

"ಸಂತೋಸ, ಬುದ್ಧಿ ಈ ಸಾಮಾನ್ನೆಲ್ಲ ನಮ್ಮ ಪಾಲಿಂದಾಯ್ತು, ಇನ್ನಾ ನಮ್ಮ ಮಲ್ನಾಡದಾಗಿನ ಎಲ್ಲಾ ಮುತ್ಕಾಳ್ರು, ಕುಡಕರೂ, ಹುಂಬ ಜನ್ರಿಗೇನಾದ್ರೂ ಕೊಡಬೇಕಲ್ಲ ಬುದ್ಧೀ ನೀವು" ಅಂಬಿಗನೆಂದ.

"ಹಾ! ಮತ್ತೇನಯ್ಯಾ ಇದೆ ನನ್ನ ಹತ್ರಾ? ಎಲ್ಲಾ ನಿಮ್ಗೆ ದಾನಾ ಮಾಡಿಬಿಟ್ಟೇನಿ, ಜೀವಾ ಒಂದು ಬಾಕಿ ಇದೆ.'' ತ್ರಾಸಯುಕ್ತ ಸ್ವರದಿಂದ ನಾನೆಂದೆ.

"ಆ ಜೀವಾನೇ ಬುದ್ಧಿ ಬೇಕಾದ್ದು'' ನಸುನಗುತ್ತ ಅಂಬಿಗನೆಂಡ.

''ಹೌದಯ್ಯ, ನನ್ನ ಬೆನ್ನಿಗೆ ಕಲ್ಲು ಕಟ್ಟಿ ಹೊಳೇ ಪಾಲು ಮಾಡಿದ್ರೆ, ಮೊಸಳೆ ಮೀನಿಗೆ ತುತ್ತಾಗುತ್ತೇನೆ ಹೊರ್ತು, ನಿಮ ಹಳ್ಳಿ ಜನರಿಗೇನು ಹಿತಾ ಇದೆಯಯ್ಯಾ'' ನಾನೆಂದೆ.

"ಬುದ್ಧಿ ಹಾಗಲ್ಲ ಕಣ್ರಿ, ನೀವು ಜೀವದಿಂದ್ರೂವರ್ಗೆ, ಈ ಮತ್ಕಾಳ ಜನ್ರು, ಈ ವರ್ತು ಮಲ್ನಾಡಿನ ಜನ್ರು, ಸುದಾರ್ಸೊದೊಂದೇನಾ ದ್ರೂವೆ ಕೆಲಸ-ಉಪಾಯ ಮಾಡತಿವ್ನಿ ಅಂತ ನಮ್ಮ ಕೈಮೇಲೆ ಕೈ ಹಾಕಿ-ದೇವರಾಣೆ ಮಾಡಿದ್ರೆ ಸರಿ-ಅದೇ ನಮ್ಗೂ ಬೇಕಾದ್ದು.'' ಅಂಬಿಗನೆಂದ.

ಆಯಿತು; ನನಗೆ ಸಂಶಯವುಂಟಾಯಿತು. ಇವರು ನಿಜವಾಗಿಯೂ ಅಂಬಿಗರೋ, ಖೂನೀ ದರೋಡೆ ಮಾಡುವವರೋ, ಅಥವಾ ಈ ಮಲೆನಾಡು ಭೂಮಿಯ ಏಕನಿಷ್ಠ ಭಕ್ತರೋ? ಯಾವದೊಂದರ ನೆಲೆಯನ್ನೂ ನಾನು ಕಂಡುಹಿಡಿಯದವನಾದೆನು!

"ಏನಯ್ಯ ನೀವು ನಿಜವಾಗಿಯೂ ಅಂಬಿಗರೇ" ಅವರಿಗೆ ಎವೆಯಿಕ್ಕದೆ ನೋಡುತ್ತ ನಾನೆಂದೆ. "ಅಲ್ಲವೇ, ಮತ್ತೆ ಸಾವು ನಿಜವಾಗಿಯೂ ಅಂಬಿಗರು'' ಯಾವ ಪ್ರಕಾರದ ವಿಕಾರವಿಲ್ಲದೆ ಅಂಬಿಗನೆಂದ.

"ಹಾಗಾದ್ರೆ ನಿಮ್ಮ ಪಾಡು ನೀವು ನೋಡಿಕೊಂಬೋದು ಬಿಟ್ಟು ಈ ಎಲ್ಲಾ ಮಲ್ಲಾಡಿನ ವಿಚಾರ ನಿಮಗ್ಯಾತ್ಕೆ? ನಾನು ಇಲ್ಲಿ ದೇವ ರಾಣೀ ಮಾಡಿ, ಹೊಳೆ ತಡಾಯ್ತು ಹೋದ ಮೇಲೆ ನಿಮಗೆ ಮಾತು ಕೊಟ್ಹಾಂಗೆ ನಡೀದೇ ಹೋದ್ರೆ ನೀವು ಮಾಡೋದಾದ್ರು ಏನು'' ನಾನೆಂದೆ.

"ಓಹೊ! ಬುದ್ಧಿ ನಾವು ಪಾರಾದ್ವಯ್ಯ, ನಿಮ್ಮನ್ನ ಹಾದಿ ಬಡದು, ಕಟ್ಟಿಕೊಂಡ ಪಾಪವೆಲ್ಲ ಪುಣ್ಯ ಆಯ್ತು. ಒಳ್ಳೇ ಕೆಲಸ ಮಾಡತೀವ್ನಿ ಅಂತ ದೇವರಾಣೀಮಾಡಿ- ಕಡೆಗೆ ಆ ದೇವರ್ನೇ ಮರೆತು ಬಿಡೋ ನಿಮ್ಮಂತ ಜನ್ರಿಗೆ, ಶೀಕ್ಷೆಮಾಡಿದ ಪುಣ್ಯ ಈಗ ದರೋಡೆ ಮಾಡಿದ್ರಿಂದ ಬಂತು'' ಬಹು ದಿಟ್ಟವಾಗಿ ಆವೇಶಯುಕ್ತಸ್ವರದಿಂದ ಅಂಬಿಗನೆಂದ.

ನಾನು ಬೆಪ್ಪನಾಗಿ ಕುಳಿತುಕೊಂಡು ಬಿಟ್ಟೆನು. ನಾನು ಯಾವ ಅಪರಾಧವನ್ನೂ ಮಾಡದೇ ಇದ್ದರೂ, ನನ್ನನ್ನೇ ಶಿಕ್ಷಿಸಿ ತಾನು ಪುಣ್ಯ ಕಟ್ಟಿಕೊಳ್ಳುವ ಈ ಅಂಬಿಗನ ಧೈರ್ಯವನ್ನು ನೋಡಿ ಹುಚ್ಚ ನಾದೆನು. ನನ್ನನ್ನು ಒಂದೊಂದು ಮಾತಿಗೂ ಬಾಯಿಕಟ್ಟುಮಾಡು ವನಿವನು ನಿಜವಾಗಿಯೂ ಅಂಬಿಗನೇ ಎಂದೆನಿಸಿತು. ಬಹಳ ಹೊತ್ತು ಯೋಚಿಸಿದನಂತರ ನಿರ್ಧಾರವಾಯಿತು. "ನೀನು ಬೈದಿರದಿದ್ದರೆ ನಿಮ್ಮಪ್ಪನು ಬೈದಿರಬಹುದು'' ಎಂಬ ನೆವದಿಂದ ಕುರಿಯನ್ನು ನುಂಗಿದ ತೋಳನ ಕತೆಯು ನೆನಪಿಗೆ ಬಂದಿತು. ಯಾವದಾದರೊಂದು ನೆವ ದಿಂದ ಕಳ್ಳತನ ದರೋಡೆ ಮಾಡಲಿಕ್ಕಿರುವ ಅಂಬಿಗರಿವರು, ಎಂದು ನಾನು ನಿಶ್ಚಯಿಸಿದೆನು. ನನ್ನನ್ನು ಈ ಪ್ರಕಾರದ ಅವಸ್ಥೆಗೆ ಗುರಿಮಾ ಡಿದ ನನ್ನ ಪತ್ನಿಯನ್ನು ನನ್ನ ಭಾವ ನಂಜಪ್ಪನವರನ್ನು ಮನಸೋಕ್ತ ಶಪಿಸಿದೆನು. ನಾನು ಒಬ್ಬೊಂಟಿಗನಾಗಿದ್ದೆನು, ನಿಸ್ಸಹಾಯನಾಗಿದ್ದೆನು. ಹಲಸೂರು ಕೂಗಳತೆಗಿಂತಲೂ ದೂರವಿದ್ದಿತು. ಆ ನದಿಯ ಮಧ್ಯದಲ್ಲಿ ಹರಗೋಲಿನಲ್ಲಿ, ಅಪರಾತ್ರಿಯಲ್ಲಿ ಯಮದೂತರಂತೆ ನಿಂತಿರುವ ಅಂಬಿ ಗರ ಕೈಲಿ ಸಿಕ್ಕಿರುವೆನೆಂಬದು ಯೋಚಿಸಿದ ತಕ್ಷಣವೇ ಬವಳಿಬಂದು ಮೂರ್ಛೆಹೊಂದಿ, ಆ ಹರಗೋಲಿನಲ್ಲಿಯೇ ಬಿದ್ದೆನು. ಸ್ವಲ್ಪ ಹೊತ್ತಿನ

ನಂತರ ಎಚ್ಚರವಾಗಲು ನನ್ನ ಬೆನ್ನಿಗೆ ಭಾರವಾದದ್ದೊಂದು ಕಲ್ಲು ಕಟ್ಟಿದುದು ಗೊತ್ತಾಯಿತು. ಒಬ್ಬ ಅಂಬಿಗನು ನನ್ನ ಕೈಗಳೆರಡನ್ನೂ ಘಟ್ಟಿಯಾಗಿ ಹಿಡದಿದ್ದನು, ಮತ್ತೊಬ್ಬನು ಕಾಲುಗಳೆರಡನ್ನೂ ಕಟ್ಟುತ್ತಿದ್ದನು.

"ಬುದ್ಧಿ ಬಾಳಾ ಹೊತ್ತಗಂಟ ನೋಡಿದ್ವಿ, ನೀವು ಯಾವ ಮಾತ್ನೆ ಆಡಲಿಲ್ಲಾ, ಅದಕ್ಕೆ ನಿಮಗೆ ಹೊಳೆ ದೂಡತೀವಿ, ನಿಮಗಿಷ್ಟಾ ಇರೋ ದೇವರ್ನೋ ಹೆಂಡ್ರನ್ನೋ, ಮಕ್ಕಳನ್ನೊ ಒಮ್ಮೆ ನೆನ್ಸಿಕೊಳ್ರಿ'' ಅಂಬಿಗನು ಬಹು ಮೆಲ್ಲಗೆ ಅಂದನು.

ಆ ಹೃದಯುದ್ರಾವಕ ಮಾತು ಕೇಳಿ ಹೌಹಾರಿಹೋದೆನು. ಸ್ವಲ್ಪ ಹೊತ್ತಿನನಂತರ ಸಾವಧಾನವಾಗಿ

"ಅಯ್ಯ ಅಂಬಿಗರೇ, ಈ ಸಾಮಾನುಗಳೆಲ್ಲ ನಿಮ್ಮವೇ. ಜೀವದಿಂದಿರೋವರ್ಗೆ ಈ ನಮ್ಮ ಮಲೆನಾಡನ್ನುದ್ಧಾರ ಮಾಡುವದಕ್ಕೋಸ್ಕರ ಅವಿವೇಕ, ಮುಠ್ಠಾಳ, ಅಶಿಕ್ಷಿತ, ಹಳ್ಳಿ ಜನ್ರ ಸುಧಾರಣೆ ಮಾಡ್ತು ತ್ತೇನೆಂತೆ ದೇವರಾಣೇನೂ ಮಾಡತೇನಿ. ಈಗಲಾದರೂ ಬಿಟ್ಟು ನನ್ನ ಹಲಸೂರ ತನಕ ತಲ್ಪಿಸ್ರಿ" ಎಂದು ಬಹು ದೀನನಾಗಿ ನಾನು ಅಂದು ದೇವರಾಣೆಯನ್ನು ಮಾಡಿದೆನು. ಅಂಬಿಗರಿಬ್ಬರೂ ನನ್ನ ಬೆನ್ನಿಗೆ ಕಟ್ಟಿದ ಕಲ್ಲನ್ನು ಬಿಚ್ಚಿದರು. ಅನಂತರ ಗಿಡಕ್ಕೆ ಕಟ್ಟಿದ ಹರಗೋಲಿನ ಹಗ್ಗವನ್ನು ಚೂರಿಯಿಂದ ಕೊಯ್ದು ಹರಗೋಲನ್ನು ಸೆಳವಿಗೆ (ನದಿಯ ಪ್ರವಾಹಕ್ಕೆ) ಬಿಟ್ಟರು. ಆ ಹರಗೋಲು ತನ್ನ ಮೈಸುತ್ತ ತಿರಗುತ್ತ ಐದು ನಿಮಿಷದಲ್ಲಿ ಹಲಸೂರು ಧಡಕ್ಕೆ ತಲುಪಿತು.

ತರಕಾರೀ ಬುಟ್ಟಿಯೊಂದನ್ನು ಬಿಟ್ಟು ಎಲ್ಲ ಸಾಮಾನುಗಳನ್ನು ಅವರ ವಶಮಾಡಿದೆನು, ನನಗೆ ಅತ್ಯಂತ ಪ್ರಿಯವಾದ Words-worth ನ ಕಾವ್ಯಸಂಗ್ರಹವನ್ನು ಕೂಡ. ಆ ಅಂಬಿಗರು ನನ್ನನ್ನು ಬಿಟ್ಟುಕೊಡಲಿಲ್ಲ. ನದಿಯ ಆಚೇ ತೀರದಿಂದ ಎದುರಿಗೆ ಕಾಣುತ್ತಿದ್ದ ಹಲಸೂರು ಈಗ್ಗೆ ನಾವು ತಲುಪಿದ ಧಡದಿಂದ ಎಡಕ್ಕೆ ೧ ಫರ್ಲಾಂಗಿನಷ್ಟು ದೂರವಿದ್ದಿತು. ಹರಗೋಲು ನದಿಯ ಸೆಳವಿಗುಂಟ ಹೋಗು

ತ್ತಿದ್ದದರಿಂದ ಈ ಅಂತರವುಂಟಾಯಿತು. ಹೊಳೆದಾಟಿ ಪಾರಾದೊಡನೆ ಕೂಗಿಕೊಂಡು, ಬೊಬ್ಬೆಹೊಡೆದು ಹಲಸೂರು ಹಳ್ಳಿಯ ಜನರನ್ನು ಬರಮಾಡಿಕೊಂಡು, ಈ ಕಳ್ಳ ಅಂಬಿಗರನ್ನು ಹಿಡಿಯಬೇಕೆಂದು ಮಾಡಿದ ನನ್ನ ಯೋಚನೆಯು ವ್ಯರ್ಥವಾಯಿತು. ಸುಮ್ಮನೆ ಹರಗೋಲು ಬಿಟ್ಟು ಧಡಕ್ಕಿಳಿದೆನು.

"ಬುದ್ಧಿ, ಶರಣು ಗುರ್ತಿರಲಿ, ಆಗೋ ನೋಡಿ ಅಲ್ಲಿ ಯಾರೋ ಒಬ್ಬರು ಬೆಂಕೀ ಕಾಸತ ಕುಂತಕೊಂಡವ್ರೆ. ಅವನು ಹಲಸೂರ ತಳವಾರ (ಓಲೇಕಾರ) ಅವನಿಗೆ ಜಮೀನುದಾರ ನಂಜಪ್ಪನವರ ಮನೆ ಯಾವುದೆಂದು ಕೇಳಿದ್ರೆ, ನಿಮ್ಮನ್ನು ಅವರ ಮನೆ ಗಂಟ ಒಯ್ದು ಬಿಡತಾವ್ನೆ. ನಾವು ಹೋಗಿ ಬರುತ್ತೀವಿ, ಶರಣು'' ಎಂದ ಅಂಬಿಗ. ನಾನು ಯಾವ ಮಾತನ್ನೂ ಆಡದೆ ಸುಮ್ಮನಿದ್ದೆ. ಅಂಬಿಗನಾದರೂ ನನ್ನ ಉತ್ತರದ ಹಾದಿಯ ನೋಡದೆ ಪುನಃ ಹರಗೋಲನ್ನು ಸೆಳವಿಗೆ ಹಾಕಿಕೊಂಡು ನಾನು ನೋಡು ನೋಡುತ್ತಿದ್ದಂತೆ ಆಚೇ ದಂಡೆಯನ್ನು ತಲುಪಿ ಎತ್ತೋ ಮಾಯವಾದರು. ಆಯಿತು ಸಪ್ತಮಿಯ ಚಂದ್ರನು ಅಸ್ತಂಗತನಾಗಿದ್ದನು. ಗಾಢಾಂಧಃಕಾರದಲ್ಲಿ ಕೆಸರಿನಲ್ಲಿ ಬೀಳುತ್ತ ಏಳುತ್ತ ಬೆಂಕೀ ಕಾಯಿಸುತ್ತಿದ್ದ ತಳವಾರನಿದ್ದೆಡೆಗೆ ಬರಬೇಕಾದರೆ ಬಹು ಪ್ರಯಾಸವಾಯಿತು. ಹಲಸೂರ ಹೊರಗಿರುವ ಮಾರುತೀ ದೇವಾಲಯದ ಅಂಗಳದಲ್ಲಿ ತಳವಾರನು ಬೆಂಕೀ ಕಾಯಿಸುತ್ತ ಕುಳಿತುಕೊಂಡಿದ್ದನು. ಅವನು ತನ್ನ ಎರಡೂ ಕೈಗಳ ಬೆರಳನ್ನು ಒಂದರ ಮಧ್ಯದಲ್ಲಿ ಒಂದು ಇಟ್ಟು ತಿಕ್ಕಿಕೊಳ್ಳುತ್ತಿದ್ದನು. ಸ್ವಲ್ಪ ಹೊತ್ತು ಕೈಗಳನ್ನು ಕಾಸಿ "ಆ ಹಾ ಹಾ"! ಎಂದು ಉದ್ಗರಿಸುತ್ತಿದ್ದನು. "ಮಹಾರಾಯನಿಗೆ ಹುರುಕು ಕಜ್ಜಿಯ ಬಾಧೆಯುಂಟಾಗಿದೆ'' ಎಂದು ತಿಳಿದುಕೊಂಡೆ. ಹೀಗೆ ಅವನು ಬೆಂಕೀ ಕಾಯಿಸುತ್ತ ಕುಳಿತುಕೊಂಡಿರುವಾಗ, ನಾನು ಅವನ ಹಿಂದುಗಡೆ ಬಂದು ನಿಂತದ್ದು ಅವನಿಗೆ ಗೊತ್ತೇಯಿರಲಿಲ್ಲ.

"ನೀನು ಯಾರಯ್ಯ?'' ಎಂದು ಸ್ಪಷ್ಟ ವಾಣಿಯಿಂದ ನಾನಂದೆ.

ಆ ತಳವಾರನು ಮೆಟ್ಟಿಬಿದ್ದು, "ಆ" ಎಂದು ನನ್ನ ಕಡೆಗೆ ನೋಡುತ್ತ "ನಾನು ಈಯೂರ ತಳವಾರ'' ಎಂದನು.

''ಇಂಥ ಅಪರಾತ್ರೀಲಿ ಇಲ್ಲಿ ಯಾತಕ್ಕೆ ಕುಳಿತುಕೊಂಡಿರೋದು?'' ನಾನೆಂದೆ.

"ಗಸ್ತು ಹಾಕಿ ಬಂದು ಈಗ ಒಂದು ಚಾ (ಕ್ಷಣ) ಹೊತ್ತು ಇಲ್ಲಿ ಬೆಂಕೀ ಕಾಸ್ತಾ ಕುಂತಿವ್ನಿ'' ತಳವಾರನೆಂದ.

''ಅಯ್ಯ ನಿನಗೆ ಜಮೀನದಾರ ನಂಜಪ್ಪನವರ ಮನೆಯಲ್ಲಿದೆ ಗೊತ್ತೋ ?'' ನಾನೆಂದೆ.

"ಓಹೋ! ಗೊತ್ತಿರದೆ ಏನು! ಸ್ವಾಮೀ ನೀವು ಅವ್ರ ಮನಿಗೆ ಹೋಗಬೇಕಾ ?'' ತಳವಾರನೆಂದ.

"ಹೌದು ಕಾಣಯ್ಯ, ರವಷ್ಟು ಅವರ ಮನೆ ತೋರಿಸು. ನಾನು ಈ ಊರಿಗೆ ಹೊಸಬ" ನಾನೆಂದೆ.

"ನೀವು ಯಾವೂರ್ಲಿಂದಾ ಬಂದ್ರಿ ಬುದ್ಧಿ'' ಎಂದು ಕೈಲಿರುವ ಕೋಲಿನ ಸಹಾಯದಿಂದ ಮೇಲಕ್ಕೆದ್ದು ನಿಂತು "ಇಂತಾ ಸರ್ವೊತ್ತಿನಾಗೆ (ಅಪರಾತ್ರಿಯಲ್ಲಿ) ನೀವು ಒಬ್ರೇಯಾ ಬಂದದ್ದು?'' ತಳವಾರನು ಪ್ರಶ್ನೆಮಾಡಿದನು.

"ಅದೆಲ್ಲ ಆ ಮೇಲೆ ಹೇಳ್ತೀನಿ, ಮೊದಲು ಮನೆ ತೋರಿಸಪ್ಪ. ಜಾಗ್ರತೆ ಹೋಗೋಣು. ನಿನ್ನೆಯಿಂದಾ ಹೊಟ್ಟೆಗೆ ಅನ್ನವಿಲ್ಲ. ಬಹಳ ಹಸಿವಾಗಿದೆ" ತಪ್ತನಾಗಿ ನಾನೆಂದೆ.

"ಉ! ನಡಿರಿ ಬುದ್ಧಿ ಆಗಾದರೆ'' ಎಂದು ಕೈಯಲ್ಲಿ ಲಾಂದ್ರವನ್ನು ತೆಗೆದುಕೊಂಡು "ಬುದ್ಧಿ, ನನ್ನ ಹತ್ರಕ್ಕೆ ಬಿಸಿ ಹುರಿಗಾಳದೆ. (ಎಲ್ಲವೂ ಕೂಡಿಸಿ ಮಾಡಿದ ಖಾದ್ಯ) ತಿಂತೀರಾ ಅಪ್ಪಾರಾ ಒಟ್ಟೆ ಹಸದಿದ್ರೆ" ಎಂದು ಅಂಗಿಯ ಜೇಬಿನಲ್ಲಿರಿಸಿದ ಚಿರಕುಳ್ಳಿಯನ್ನು ತನ್ನ ಹುರುಕು, ಕಜ್ಜಿಗಳಾದ ಕೈಯಿಂದಲೇ ತಳವಾರನು ಕೊಡಬಂದನು.

"ಬೇಡಪ್ಪ ಅದೆಲ್ಲ, ಜಾಗ್ರತೆ ಕಾಲು ಹಾಕು'' ಎಂದು ಅವನಿಗೆ ಒತ್ತಾಯಮಾಡಿ ಅವನ ಜೊತೆಗೆ ಹೊರಟೆ. ಊರನ್ನೆಲ್ಲಾ ಹಾದು, ಊರ ಹೊರಗಿರುವ ಒಂದು ಮನೆಯ ಹತ್ತಿರ ಬಂದು ನಿಂತೆವು.

"ಇದೇ ಸಾಮಿ ಮಂಜಪ್ಪನೋರ ಮನೆ" ತಳವಾರನೆಂದ.

"ರವಷ್ಟು ಕೂಗಿ ಬಾಗಿಲ ತೆಗೆಹೇಳಪ್ಪ'' ನಾನೆಂದೆ.

ತಳವಾರನು ನಂಜಪ್ಪನವರ ಹೆಸರು ಹಿಡಿದು ಕೂಗಿಕೊಂಡ. ಸ್ವಲ್ಪ ಹೊತ್ತಿನನಂತರ ಅವರ ಮನೆಯ ಆಳು ಒಬ್ಬನು, ನಿದ್ರೆ ಕಣ್ಣನ್ನೊರಸುತ್ತ ಬಾಗಿಲು ತೆರೆದು, "ಸ್ವಾಮಿ, ನಂಜಪ್ಪನವರು ಊರಲ್ಲಿಲ್ಲ, ತಾವು ಯಾರೆಂ''ದನು.

"ಬೆಂಗಳೂರಿನಿಂದ, ಅವರ ನೆಂಟರ್‍ಯಾರೋ ಬಂದಿದಾರೆ, ಅಂತ ಹೇಳಪ್ಪ ಮನೆಯವರಿಗೆ'' ನಾನೆಂದೆ.

ಸ್ವಲ್ಪ ಹೊತ್ತಿನನಂತರ. ನನ್ನ ಪತ್ನಿಯು ಆಳೊಂದಿಗೆ ಕೈಲಾಂದ್ರವನ್ನು ಹಿಡಿದುಕೊಂಡು ಬಂದಳು. ಕಡೆಗೊಮ್ಮೆ ಹಲಸೂರಿನಲ್ಲಿಯ, ನಮ್ಮವರ ಮನೆಯನ್ನು ಸೇರಿದೆನು.

ನನ್ನ ಪತ್ನಿಯು ತಂದು ಕೊಟ್ಟ ನೀರಿನಿಂದ ಕೈಕಾಲುಗಳನ್ನು ಸ್ವಚ್ಛವಾಗಿ ತೊಳೆದುಕೊಂಡು, ಒಳಗೆ ಪಡಸಾಲೆಯಲ್ಲಿ ಹೋಗುವದರೊಳಗಾಗಿ, ಸ್ವಲ್ಪ ದಿನಗಳ ಹಿಂದೆಯೇ ಗಂಗಾಭಾಗೀರಥೀ ಸ್ವರೂಪ ಹೊಂದಿದ ನಮ್ಮ ಅತ್ತೆಯವರು ಬಂದು ನಿಂತುಕೊಂಡಿದ್ದರು. ಸಾಷ್ಟಾಂಗ ನಮಸ್ಕಾರ ಮಾಡಿದೆ ಆವರಿಗೆ. ಶುಭಾಶೀರ್ವಾದ ಮಾಡಿದ ನಂತರ, "ಅಚ್ಚಮ್ಮಾ (ವತ್ಸಲೆಯ ಅಚ್ಚೆಯ ಹೆಸರು), ರಾತ್ರಿ ಬಹಳವಾಗಿದೆ. ಬೇಳೆ ಬೇಯ್ಸೋದು ಕಷ್ಟ. ಹುಳಿ ಅನ್ನ, ಕೆನೆ ಮೊಸರನ್ನ ಮಾಡಿ ಬಿಡಮ್ಮ" ಅಂದರು ಅತ್ತೆಯವರು. «ಆರೋಗ್ಯವಾಗಿದ್ದೀರಾ, ದಾರಿಯಲ್ಲಿ ಆಯಾಸ ಬಹಳಾಗಿದೆಯೇನು?'' ಎಂದು ಉಪಚಾರದ ನುಡಿಯಿಂದ ಅತ್ತೆಯವರೆಂದರು.

ಓಂ ಪ್ರಥಮ, ಎಂದು ನಾನು ದಾರಿಯಲ್ಲಿ ಅನುಭವಿಸಿದ ಕಷ್ಟಗಳನ್ನು, ಅತ್ತೆಯವರಿಗೆ ಹೊಳಿಕೊಳ್ಳೋದು ಸರಿ ಬರಲಿಲ್ಲ.

"ಚನ್ನಾಗಿಧೇನೆ. ನಂಜಪ್ಪನವರು ಊರಲ್ಲಿಲ್ವೆ ?" ನಾನೆಂದೆ.

"ಇಲ್ಲ. ಅವನು ತನ್ನ ಹೆಂಡತಿಯನ್ನು ಕಳಿಸಿ ಬರೋಕೆ ಅರಸೀಕೇರಿಗೆ ಹೋಗಿಧಾನೆ. ನಾಳೆ ಬೆಳೀಗ್ಗೆ ಇಲ್ಲವೆ ಸಾಯಂಕಾಲದಲ್ಲಿ ಬರಬಹುದು'' ಅಂದರು ಅತ್ತೆಯವರು.

ಹೀಗೆ ಮಾತಾಡುವಷ್ಟರಲ್ಲಿ, "ಅಡಿಗೆಯಾಗಿದೆ'' ಎಂದು ನನ್ನ ಪತ್ನಿಯು ಊಟಕ್ಕೆ ಬರುವದಕ್ಕೆ ಸನ್ನೆಯನ್ನಿತ್ತಳು. ಮನೆಯ ಆಳಾದ ಸಿಂಗನಿಗೆ ಮಹಡಿಯ ಮೇಲಿರುವ ಕೋಣೆಯ ಕಸಗೂಡಿಸಿ, ದೀಪ ಹಚ್ಚಿ, ಹಾಸಿಕೆ ಹಾಕಿಡಲು, ನಮ್ಮ ಅತ್ತೆಯವರು ಆಜ್ಞೆಯನ್ನು ಮಾಡಿದರು.

ನಾನು ಒಳಗೆ ಹೋಗಿ ಊಟ ಮಾಡಲಾರಂಭಿಸಿದೆ. ಹೊಟ್ಟೆ ಬಹಳ ಹಸಿದಿದ್ದಿತು. ಹುಳಿ ಅನ್ನ, ಮನೆಯ ಕೆನೆಮೊಸರನ್ನ, ಹಪ್ಪಳ, ಸಂಡಿಗೆ, ಇಷ್ಟೇ ಊಟದ ಪದಾರ್ಥವಾಗಿದ್ದರೂ, ಬಹಳ ರುಚಿಯಾಗಿತ್ತು ಊಟ. ಊಟದ ಹೊತ್ತಿನಲ್ಲಿ, ಬೇಕು ಬೇಡ ಇದರ ಹೊರ್ತು ನಾನು ಯಾವ ಮಾತನ್ನೂ ಆಡಲಿಲ್ಲ. ಊಟವಾದನಂತರ ಅತ್ತೆಯವರು ತೋರಿಸಿದ ಮಾರ್ಗದಿಂದ ಮಹಡಿಯನ್ನೇರಿ ಹೋದೆನು. ಮಲಗುವ ಕೋಣೆಯೇನೋ ಬಹಳ ಸಮಾಧಾನಕರ ಸ್ಥಿತಿಯಲ್ಲಿದ್ದಿತು. ಸಿಮೇ ಅಂಟನಿಂದ ಗಾರೇಹಾರೇ ಹಾಕಿದ ನೆಲ. ಸಾಕಷ್ಟು ಗಾಳಿ ಬೆಳಕಿಗೆ ಅವಕಾಶ ಕೊಡುವ ಕಿಟಿಕೆಗಳಿದ್ದವು. ಗಿಲಾಯಿ ಮಾಡಿ ಸುಣ್ಣ ಬಳಿದ ಗೋಡೆಗಳ ಮೇಲೆ ಸುಂದರ ಪಟಗಳೂ, ಛಾಯ ಚಿತ್ರಗಳೂ ತೂಗಿ ಬಿಟ್ಟಿದ್ದರು.

ಶುಭ್ರ ವಸ್ತ್ರಾಚ್ಛಾದಿತವಾದ ಹಾಸುಗೆಯು, ಲೋಹಪರ್ಯಂಕ (ಪಲ್ಲಂಗ) ದ ಮೇಲೆ ಸಿದ್ಧವಾಗಿದ್ದಿತು. ಕೋಣೆಯ ಒಂದು ಪಕ್ಕದಲ್ಲಿ ಎರಡು ಕುರ್ಚಿಗಳೂ, ಒಂದು ಮಾಟಾದ ಮೇಜೂ, ಕೆಲವು ಪುಸ್ತಕಗಳಿಂದೊಡಗೂಡಿದ ಒಂದು ಸೆಲ್ಫೂ ಇದ್ದಿತು. ಮಲ್ನಾಡಿನಲ್ಲಿದ್ದರೂ ಮಲಗುವ ಕೋಣೆ ಚನ್ನಾಗಿದೆ ಎಂದುಕೊಂಡೆ. ಸ್ವಲ್ಪ

ಹೊತ್ತಿನಲ್ಲಿಯೇ ನನ್ನ ಪತ್ನಿಯು ಚಿಕ್ಕ ವಾಸುದೇವನನ್ನು ಎತ್ತಿ ಕೊಂಡು ಬಂದಳು. ಕೆಳಗೆ ಹಾಕಿದ ಹಾಸುಗೆಯ ಮೇಲೆ ಅವನನ್ನು ಮಲಗಿಸಿ, ಕೋಣೆಯ ಬಾಗಿಲು ಮುಚ್ಚಿ ಬಂದು, ತಾನು ತಂದ ತಾಂಬೂಲದ ತಟ್ಟೆಯನ್ನು ಮೇಜಿನ ಮೇಲಿಟ್ಟಳು.

ಸಮಾಧಾನವಾಗಿ ತಾಂಬೂಲವನ್ನು ಚರ್ವಣ ಮಾಡುತ್ತ "ವತ್ಸಲೇ" ನಾನೆಂದೆ.

ಮುಗುಳುನಗೆಯಿಂದ ನನ್ನನ್ನು ನೋಡುತ್ತ, ವತ್ಸಲೆಯು ಸುಮ್ಮನೇ ಇದ್ದಳು.

"ದೇವರು ಅನುಗ್ರಹ ಮಾಡಿದ್ದರಿಂದ ನೀನು ನನ್ನ ಮುಖ ನೋಡುತ್ತಾ ಇದ್ದೀ ಇಂದು" ನಾನೆಂದೆ.

"ಏನದು?" ಜಿಜ್ಞಾಸೆಯಿಂದ ವತ್ಸಲೆಯೆಂದಳು.

"ಏನೂ ಇಲ್ಲ, ನೀನು ನಿಮ್ಮ ನಂಜಣ್ಣ ಮಾಡಿದ ಆಟ" ತಿರಸ್ಕಾರ ವಾಣಿಯಿಂದ ನಾನೆಂದೆ.

"ಅದೇನು, ಆಟ ಯಾವದು!" ವತ್ಸಲೆಯೆಂದಳು.

"ಹುಡುಗಾಟ! ನನ್ನನ್ನು ನೀರಲ್ಲಿ ಮುಳಿಗಿಸೋ ಆಟ" ಕ್ರುದ್ಧನಾಗಿ ನಾನೆಂದೆ.

"ನಿಮ್ಮಾತಿನ ಅರ್ಥಾ ಆಗೋದಿಲ್ಲ ನಂಗೆ, ನೀರು ಯಾವದು? ಮುಳಗೋರ್‍ಯಾರು?" ವತ್ಸಲೆಯು ಕಡೆಗಣ್ಣಿನಿಂದ ನನ್ನನ್ನು ನೋಡಿ ಅಂದಳು.

"ಆ ಚಂಬಿನಲ್ಲಿರೋ ಭದ್ರಾನದೀ ನೀರು, ಅದನ್ನು ಕುಡಿದೇ ಮುಳಗೋನು ನಾನು!"

"ಅದೆಲ್ಲ ನಾ ಕಾಣೆ! ಹೀಗೆ ಒಗಟ ಹಾಕಿಧಾಂಗೆ ಮಾತೇನು ಚನ್ನಾಗಿರುತ್ತೆ? ಎಲ್ಲಾ ತಿಳಿಯೋ ಹಾಗೆ ಮಾತಾಡಿದರೆ ಸೈ" ವತ್ಸಲೆಯು ನನ್ನ ಹತ್ತಿರ ಬಂದು ನುಡಿದಳು.

ನಾನು, ಬಿದಿರೆಯಿಂದ ಹಲಸೂರು ತಲ್ಪುವವರೆಗೆ ಸಮಗ್ರವಾಗಿ, ನಡೆದ ವೃತ್ತಾಂತವನ್ನೆಲ್ಲ ನುಡಿದೆನು. ನದಿಯಲ್ಲಿ ಅಂಬಿಗರು ಮಾಡಿದ ಛಳವನ್ನೆಲ್ಲ ಉಸುರಿದೆನು. ವಿಶ್ವಾಸಘಾತಕೀ ಅಂಬಿಗರನ್ನು ಕೊಟ್ಟು ಕಳಿಸಿದ್ದಕ್ಕೆ ನಂಜಪ್ಪನವರನ್ನೂ ನನ್ನನ್ನು ದಸರೆಗೆ ಹಲಸೂರಿಗ ಬರಲು ಬಲವಂತಮಾಡಿ ಕಾಗದ ಬರೆದ ನನ್ನ ಪತ್ನಿಯನ್ನೂ, ಮನ ಸೋಕ್ತ ಜರೆದೆನು. ಆಡಬಾರದ ಮಾತೆಲ್ಲ ಆಡಿದೆನು.

ವತ್ಸಲೆಯು ಯಾವ ಮಾತನ್ನೂ ಆಡದೆ ಕೋಣೆಯ ಬಾಗಿಲು ತೆರೆದು ಧಡಧಡ ಕೆಳಕ್ಕಿಳಿದು ಹೋದಳು. ಸ್ವಲ್ಪ ಹೊತ್ತಾದ ಬಳಿಕ, ಮೇಲೆ ಬಂದು ತಾನು ತಂದಿದ್ದ ಲಕ್ಕೋಟೆಯೊಂದನ್ನು ನನ್ನ ಕೈಗೆ ಕೊಟ್ಟು

"ಈ ಕವರು ನಿನ್ನೆ ಬೆಳಿಗ್ಗೆ ನಮಿಗೆ ತಲ್ಪಿತು, ಇದರಲ್ಲಿ ನೀವು ಬರೆದ ಕಾಗಪವು ಇಲ್ಲೇಇಲ್ಲ. ನಾನು ಇಲ್ಲಿಂದ ಬರೆದ ಕಾಗದಾನೇ ವಾಪಸು ಕಳಿಸಿದಿರಿ. ನೀವು ದಸರೆಗೆ ಬರತೀರೆಂಬದು ಗೊತ್ತಾಗಲಿಲ್ಲ, ಬರೋದಿಲ್ಲೆಂತಲೂ ಗೊತ್ತಾಗಲಿಲ್ಲ. ನಂಜಣ್ಣ ಅತ್ತಿಗಿನ್ನ ಕರ ಕೊಂಡು ನಿನ್ನೆ ದಿವ್ಸಾನೇ ಅರಸೀಕೆರೆಗೆ ಹೋದ" ಎಂದು ಗದ್ಗದ ಕಂಠಳಾಗಿ ನುಡಿದಳು.

ನಾನು ಆಶ್ಚರ್ಯಭರಿತನಾಗಿ ಲಕ್ಕೋಟೆಯನ್ನು ನೋಡಿದೆನು. ವಿಳಾಸದ ಹಸ್ತಾಕ್ಷರವು ನನ್ನದೆ ಇದ್ದಿತು. ಖಂಡಿತವಾಗಿ ನಾನು ಬರೆದ ಕವರೇ ಇದು. ಒಳಗಿನ ಪತ್ರವನ್ನು ನೋಡಿದೆನು. ಅದು ನನ್ನ ಪತ್ನಿಯು ಬರೆದ ಪತ್ರವೇ ಸರಿ! ನಾನು ಬೆಂಗಳೂರಿನಲ್ಲಿ ಆ ಪತ್ರವನ್ನೋದುತ್ತಿರುವಾಗ ಕೈಯಲ್ಲಿದ್ದ ಸಿಗರೇಟಿನ ಬೂದಿಯು ಅದರ ಮೇಲೆ ಬೀಳಲಾಗಿ ಅದನ್ನು ಒರಿಸಿದ ಕಲೆಗಳು ಸ್ವಚ್ಛವಾಗಿ ಕಾಣು ತ್ತಿದ್ದವು. ವಿಸ್ಮರಣೆಯಿಂದ ನಾನು ಬರೆದ ಕಾಗದವನ್ನು ಮನೆಯ ಲ್ಲಿಯ ಫೈಲಿನಲ್ಲಿರಿಸಿ, ನನ್ನ ಪತ್ನಿಯ ವಿಳಾಸವನ್ನು ಬರೆದ ಕವರಿ ನಲ್ಲಿ ಅವಳು ಬರೆದ ಕಾಗದವನ್ನೇ ಇರಿಸಿರುವಂತೆ ನನಗೆ ಭಾಸ ವಾಗಲಾರಂಭಿಸಿತು. ಎಂಥ ಶುಂಭನು, ಎಬ್ಬಂಕನು ನಾನು! ಎಲ್ಲವೂ

ಮಹದಾಶ್ಚರ್ಯ! ನನ್ನ ನಿಜವಾದ ಪತ್ರವೇ ಇಲ್ಲಿ ತಲ್ಪಿರದಿದ್ದರೆ ಬಿದಿರೆಯಲ್ಲಿ ನಂಜಪ್ಪನವರ ಹೆಸರು ಹೇಳಿ ಮುಂದೆ ಬಂದ ಆ ಹುಂಬ ಸಿದ್ಧನಾದು!! ನಂಜಪ್ಪನವರು ಪುಣ್ಯವಂತರೆಂದು ಹಾಡಿ, ಹರಸಿ ನನ್ನನ್ನು ಮಂಕುಮಾಡಿದ ಆ ಠಕ್ಕ ದರೋಡೆಖೋರ ಅಂಬಿಗರಾರು, ಎಲ್ಲವೂ ಊಹಿಸಲಸಾಧ್ಯವಾಯಿತು. ಹೀಗೆ ಯೋಚಿಸುತ್ತಿರುವಾಗ ವತ್ಸಲೆಯು ಬಂದು ನನ್ನನ್ನಾಲಂಗಿಸಿ ನನ್ನ ವಕ್ಷಸ್ಥಳದಲ್ಲಿ ಮಸ್ತಕ ವನ್ನಿರಿಸಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವಳ ಬಿಸಿ ಕಂಬನಿ ಗಳು ರೋಮರಂಧ್ರ ಮಾರ್ಗವಾಗಿ ಹೃದಯವನ್ನು ಪ್ರವೇಶಿಸಿ ಭಯಂ ಕರ ಪಶ್ಚಾತ್ತಾಪದ ದಾಹವನ್ನುಂಟುಮಾಡಿದವು. ಯಾವ ಪಾಪ ವನ್ನೂ ಅರಿಯದ ನನ್ನ ಪ್ರೇಯಸಿಗೆ ಎಷ್ಟು ನಿಷ್ಠುರ ಮಾತನಾಡಿ ದೆನಲ್ಲ! ಮೂರ್ತಿಮಂತ ಸದ್ಗುಣಿ ನಂಜಪ್ಪನವರನ್ನು ಎಷ್ಟು ಜರೆ ದೆನಲ್ಲ! ಎಂದು ಮನಸ್ಸಿನಲ್ಲಿ ತಳಮಳವುಂಟಾಯಿತು. ಕೆಲ ಹೊತ್ತಿನ ವರೆಗೆ ಈ ಬಗೆಯಿಂದಿರಲು ನಿಜವಾಗಿ ಮನಸ್ಸಿಗೆ ಸ್ವಾಸ್ಥ್ಯವುಂಟಾಗ ಲಾರಂಭಿಸಿತು. ನಾನು ಮೆಲ್ಲಗೆ ವತ್ಸಲೆಯ ಮುಂಗೂದಲುಗಳನ್ನು ತೀಡಿ ಬೆನ್ನಿನ ಮೇಲೆ ಕೈಯಾಡಿಸುತ್ತ "ವತ್ಸಲೆ" ಎಂದು ಮೆಲ್ಲಗೆ ನುಡಿದೆ. ವತ್ಸಲೆಯು ಮಾತಾಡಲಿಲ್ಲ.

"ಏನೋ ಮಾತಾಡಿದೆ, ಆದೆಲ್ಲ ಮರೆತುಬಿಡೆ'' ನಾನು ಬಹು ದೈನ್ಯವಾಣಿಯಿಂದ ನುಡಿದೆನು.

ವತ್ಸಲೆಯು ತಲೆಯೆತ್ತಿ ನನ್ನನ್ನು ನೋಡಿ ಕಣ್ಣೀರು ಸುರಿ ಸುತ್ತಿದ್ದಳು. ಮಾತಾಡಲಿಲ್ಲ. ''ಯಾಕೆ ಮಾತಾಡಲೊಲ್ಲವೇ. ಇನ್ನು ಅತ್ತರೆ ನನ್ನಾಣೆ ಮಾತಾಡು, ನಿನಗೂ ನಂಜಪ್ಪನವರಿಗೂ ಸುಮ್ಮನೇ ಜರೆದೆ, ಇದೊಂದು ಸಲ ನನ್ನನ್ನು ಕ್ಷಮಿಸು" ಎಂದು ಅವಳ ಗದ್ದ ವನ್ನು ಹಿಡಿದೆಂದೆ.

ನಂಜಣ್ಣನಿಗೂ, ನಂಗೂ, ಜರದ್ಕೆ ನಾನು ರವಷ್ಟಾದರೂ ಅಳೋಲ್ಲಾ, ಕಾಗದ ಬರೆದು ನಿಮ್ಮನ್ನಿಲ್ಲಿ ಕರಿಸಿ ದಾರೀಲಿ ಯಂಥಾ ಗೋಳಿಗಿಡಿಸಿದ್ನೆನಲ್ಲಾ ಅಂತ" ಬಹುಮತದಿಂದ ವತ್ಸಲೆ ಅಂದಳು.

"ಅದೆಲ್ಲ ಹೋಗಲಿ ಬಿಡು. ಹೊದ್ದು ಸಾಮಾನು, ಕೈಗಡಿಯಾರ, ನಿನಗಂತ ತಂದ ಸೀರೆ ಅಷ್ಟೆ ತಾನೆ'' ನಾಂದೆ.

"ಅಲ್ಲವೇ ಮತ್ತೇ, ನಾಳೆ ನಂಜಣ್ಣ ಬರಲಿ ಈ ಎಲ್ಲ ಸಮಾಚಾರ ಹೇಳಿಬಿಡಬೇಕು. ಆ ಅಂಬಿಗರವ್ವ ಯಾರು, ಆ ಪೋಡಿಸಿದ್ಧ ಅಂಬೋಣ್ಯಾರು ಯಲ್ಲಾ ಗೊತ್ತಾಗತ್ತೆ" ವತ್ಸಲೆಯಂದಳು. ಗೋಡೆ ಘಡಿಯಾರದಲ್ಲಿ ಢಣ್, ಢಣ್ ಎಂದು ಎರಡು ಘಂಟೆಯಾದ ಶಬ್ದವಾಯಿತು.

"ಅದೆಲ್ಲ ನಂಜಣ್ಣ ಬಂದ್ರೆ ನಾಳೆ ಹೇಳೀಯಂತೆ, ಈಗ ರಾತ್ರಿ ಬಹಳಾಯ್ತು ಮಲಕ್ಕೊ'' ನಾನಂದೆ. ವತ್ಸಲೆಯ ಕೈಯು ಢಾಳಾಗಿ ಉರಿಯುವ ದೀಪದ ಏರಿಳಿತದ ತಿರುಪಣಿಯ ಮೇಲೆ ಬಿದ್ದಿತು ಪ್ರಕಾಶವು ಮಂದವಾಯಿತು.

* * * * * *

ಬೆಳಗಿನ ಏಳು ಏಳೂವರೆ ಗಂಟೆಗೆ ನನಗೆ ಎಚ್ಚರವಾಯಿತು. ವತ್ಸಲೆಯು ಯಾವಾಗಲೋ ಕೆಳಗಿಳಿದು ಹೋಗಿದ್ದಳು. ಚಿಕ್ಕ ವಾಸುದೇವನು ಇನ್ನೂ ಮಲಗಿದ್ದನು. ಹಾಸುಗೆಯ ಮೇಲೆ ಎದ್ದು ಕುಳಿತು ಕೈಗಳಿಂದ ಮುಖ ತಿಕ್ಕಿಕೊಳ್ಳುತ್ತಿರಲು ಭಾವ ಮೈದುನರಾದ ನಂಜಪ್ಪನವರು ನನ್ನೆದುರಿಗೆ ಬಂದು ನಿಂತರು.

"ಏನು! ಆರೋಗ್ಯವಾಗಿದ್ದೀರಾ ದಾರಿಯಲ್ಲಿ ಅಪಾಯವೇನೂ ಆಗಲಿಲ್ಲ ತಾನೇ! ಮಲ್ನಾಡು ಚನ್ನಾಗಿದೆಯೋ'' ನಂಜಪ್ಪನವರು ಸ್ಮಿತವದನರಾಗಿ ಅಂದರು.

"O God bless your dirty Malnad" ವಿನೋದವಾಗಿ ಮೈಮುರಿಯುತ್ತ ಆಕಳಿಸುತ್ತ ನಾನಂದೆ.

"ನೀವು ಇಲ್ಲಿ ಬರೋದ್ಕೆ ಮೊದ್ಲು ಒಂದು ಕಾಗದ ಬರೆದಿದ್ದರೆ ಚನ್ನಾಗಿತ್ತಲ್ಲ. ಹತ್ತಿರವೇ ಇರುವ ಕುರ್ಚಿ ಮೇಲೆ ಕುಳಿತು ಬಿದಿರೆ

ಯಿಂದ ಇಲ್ಲಿಗೆ ಬರೋದ್ಕೆ ಒಳ್ಳೆ ಅನುಕೂಲ ಮಾಡಿಕೊಡತಿದ್ದೆ'' ನಂಜಪ್ಪನವರಂದರು.

"ಅನುಕೂಲವೇನೋ, ನಿಮ್ಮ ಹೆಸರಿನಿಂದ್ಲೇ ಮಾಡಲಾಗಿತ್ತು ಇಲ್ಲಿಗೆ ಬರೋವರ್ಗೆ" ಆದರೂ ಜೀವದಿಂದ ಚನ್ನಾಗಿ ಇಲ್ಲಿಯ ವರೆಗೆ ತಲ್ಪಿದ್ದೆ. ಹೆಚ್ಚಿನ ಮಾತು. ಹಾಸುಗೆಯಿಂದ ಎದ್ದು ನಿಂತು ಧೋತರ ಸರಿಮಾಡುತ್ತ ನಾನಂದೆ.

"ಇಲ್ಲವಲ್ಲ ನನಗೆ ನೀವು ಬರೋದು ಗೊತ್ತಾಗಲೇ ಇಲ್ಲ. ಅಚ್ಚಮ್ಮ ಬರೆದ ಕಾಗದ ನೀವು ವಾಪಸು ಕಳಿಸಿದ್ದು. ಮೊನ್ನೆ ತಲುಪಿತು. ಹಾಗಾದರೆ ನಿಮಗೆ ರಜಾ ದಿವಸದಲ್ಲಿ ಇಲ್ಲಿ ಬರೋಕೆ ಇಷ್ಟವಿಲ್ಲವೇನೋ ಅಂತ ಮೊನ್ನೆ ನಾನು ಅರಸಿಕೆರೆಗೆ ಹೊರಟು ಹೋದೆ'' ನಂಜಪ್ಪನವರೆಂದರು.

"ಇರಲಿ ಆ ಸಮಾಚಾರವೆಲ್ಲ ಆ ಮೇಲೆ ಮಾತಾಡೋಣವಂತೆ'' ನಾನಂದೆ.

ಬಹಿರ್ದಿಶೆ, ಮುಖಮಾರ್ಜನ, ದಂತಧಾವನಾನಂತರ ಉಪ ಹಾರಕ್ಕೆಂದು ಕುಳಿತುಕೊಂಡೆವು. ಇವರ (ನಂಜಪ್ಪನವರ) ಮನೆಯ ಉಪಹಾರದ ಮಾದರಿಯೇ ಬೇರೆ. ನಾನು ಬೆಂಗಳೂರಿ ನವನು. ಬೆಳಿಗ್ಗೆ ಉಪಹಾರಕ್ಕೆ ದೋಸೆ, ಉಪ್ಪಿಟ್ಟು, ಇಡ್ಲಿ, ಇದ ರಲ್ಲಿ ಯಾವುದಾದರೊಂದು ಆಗಬೇಕು. ಏನು ತಪ್ಪಿದರೂ ಕಾಫಿ ಯಂತೂ ಇದ್ದೇ ತೀರಬೇಕು. ನಂಜಪ್ಪನವರಿಗೆ ಅದೆಲ್ಲ ಆಗದು. ಅವರು ಪುಣೇರಿ ಶಿಸ್ತಿನವರು. ಬೆಳಗಿನ ಉಪಹಾರಕ್ಕೆ ಶಂಕರಪಾಳಿ, ಅವಲಕ್ಕಿ, ಚಹಾ ವೊದಲಾದವುಗಳು ಬೇಕು. ಇವೆಲ್ಲ ಬೆಂಗಳೂ ರವರಿಗೆ ಸಾಯಂಕಾಲದ ಉಪಹಾರಕ್ಕೆ ಬೇಕಾದ್ದು, ಇರಲಿ. ಆದರೂ ನಮ್ಮವರ ಮುಂಜಾಗ್ರತೆಯ ಯೋಚನೆಯಿಂದ ನನಗೆ ಕಾಫಿಯ ಕೊರ ತೆಯೇನು ಬೀಳಲಿಲ್ಲ. ಉಪಹಾರ ನಡೆದಾಗ್ಗೆ ಮೊದಲಿನ ದಿನದ ಪ್ರವಾಸದ ವೃತ್ತಾಂತವನ್ನೆಲ್ಲ ಹೇಳಿದೆನು. ಅಂಬಿಗರು ಮಾಡಿದ ಮೋಸವನ್ನೆಲ್ಲ ದೂರಿಕೊಂಡೆ, ನಮ್ಮಿಂದ ಕೊಂಚ ದೂರ ಒಂದು

ಕಂಬಕ್ಕೆ ಆತು ಕುಳಿತುಕೊಂಡ ನಮ್ಮ ಅತ್ತೆಯವರು ಸಿದ್ದನನ್ನೂ ಅಂಬಿಗರನ್ನೂ ಬಹಳವಾಗಿ ಶಪಿಸಿದರು. ನಂಜಪ್ಪನವರು ಉದಾಸೀನರಾಗಿ,

"ಆದದ್ದೆಲ್ಲ ವಿಚಿತ್ರವೇ, ನಾನು ಯಾರನ್ನೂ ಕಳಿಸಿರಲಿಲ್ಲ. ಈ ಕಳ್ಳರು ಯಾವಾಗಿಂದ ನಿಮ್ಮ ಬೆನ್ನು ಹತ್ತಿದಾರೋ ದೇವರೇ ಬಲ್ಲ'' ಎಂದಂದರು. (ನಂಜಪ್ಪನವರು)

"ಪೋಲೀಸಿನವರಿಗೇನಾದರೂ ಈ ತಕರಾರು ಹೇಳಿಕೊಂಡ್ರೆ ?'' ನಾನಂದೆ.

"ಆಗಲಿ ನೋಡೋಣ, ರಾಮು (ರಾಮಸ್ವಾಮಿ) ಶಿವಮೊಗ್ಗೆಯಲ್ಲಿಯೇ ಇದ್ದಾನೆ. ಇವತ್ತು ಮಧ್ಯಾನ್ಹ ಬರಬಹುದು. ಅವನ ಅಭಿಪ್ರಾಯ ಕೇಳಿಕೊಂಡು ಮುಂದೆ ಮಾಡೋದ್ನೆಲ್ಲ ಮಾಡೋಣ" ನಂಜಪ್ಪನವರೆಂದರು.

ನಮ್ಮ ಮಾತು ನಡೆದಿರುವಾಗ್ಗೆ ಚಿಕ್ಕ ವಾಸುದೇವನು ನನಗೋಸ್ಕರ ಮಾಡಿದ ಕಾಫಿಯನ್ನೆಲ್ಲ ಯಾವಾಗಲೋ ಗುಟಕರಿಸಿ ಬಿಟ್ಟಿದ್ದನು. ನನಗದು ಗೊತ್ತಾಗಲೆಯೇ ಇಲ್ಲ. ನಿರ್ವಾಹವಿಲ್ಲೆಂದು ಬೆಳಗಿನಲ್ಲಿ ಚಹದ ಸವಿ ಹೇಗಿರುವದೆಂಬದನ್ನು ಇಂದು ಪರೀಕ್ಷಿಸಬೇಕಾಯಿತು. ಉಪಹಾರಾನಂತರ ನಂಜಪ್ಪನವರು ಸಾಗುವಳಿ ಮಾಡುತ್ತಿರುವ ತೋಟಕ್ಕೆ ಹೋದೆವು. ತೋಟದಲ್ಲಿ ನಾನಾ ಬಗೆಯ ತರಕಾರಿ, ಎಲೆಬಳ್ಳಿ, ಹಣ್ಣುಹಂಪಲಗಳ ಬೆಳೆಯನ್ನು ಬೆಳೆದಿದ್ದರು. ಪ್ರಾತಃಕಾಲದ ಆ ಉಪವನದ ವಿಹಾರವು ಮನಸ್ಸಿಗೆ ಬಹಳ ಆನಂದವನ್ನುಂಟುಮಾಡಿತು. ತೋಟದಲ್ಲಿ ಬಂಗ್ಲೆಯೊಂದನ್ನು ಕಟ್ಟಿಸಿದ್ದಾರೆ.

"ನನಗೆ ಬೆಂಗಳೂರಂಥ ಶಹರದಲ್ಲಿರೋದಕ್ಕಿಂತ ಈ ಹಳ್ಳೀಲಿರೋದೆ ಚನ್ನಾಗಿರುತ್ತೆ" ನಂಜಪ್ಪನವರಂದರು.

"ಅದೆಲ್ಲಾ ಸರಿಯೇ! ಈ ಮಾದ್ರಿ ತೋಟದಲ್ಲಿರೋ ಬಂಗ್ಲೆ ಅಥವಾ ಮನೆ ಎಲ್ಲಾ ಹಳ್ಳೀಲಿಯೂ ಎಲ್ಲಿಂದ ಬರುತ್ತೆ'' ನಾನೆಂದೆ

"ಮಾಡಿಕೊಂಡ್ರೆ ಎಲ್ಲಾ ಕಣ್ರಿ'' ಸೊಂಟದ ಮೇಲೆ ಕೈಯಿಟ್ಟು ಕೊಂಡು "ನಮ್ಮಂಥವ್ರು ಒಬ್ಬರು ಇಬ್ಬರು ಹಳ್ಳೀಲಿ ಇದ್ರೆ ಮಿಕ್ಕಾದ ಜನ್ರೆಲ್ಲಾ ನಮ್ಮ ಅನುಕರಣಮಾಡಿ ಸುಧಾರಿಸಿಕೊಂಡ್ರೂ ಸುಧಾರಿ ಸಬಹುದು.''

''ಆದರೂ ಸರಿಯೆ. ಆದರೂ ಶಹರದಲ್ಲಿರೋ ಒಂದೊಂದು ಸೌಕರ್ಯಾನು ಹಳ್ಳಿಲಿ ಏರ್ಪಾಟು ಮಾಡಿಕೊಂಬೋದು ಕಷ್ಟ'' ನಾನಂದೆ.

"ಕಷ್ಟಪಡಬೇಕು ಮತ್ತೆ, ನಮ್ಮ ಮಕ್ಕಳುಮರಿ ಮುಂದಿನ ಪೀಳಿಗೆಯಲ್ಲಾ ಸುಖವಾಗಿರಬೇಕು. ಹಳ್ಳಿವಾಸದ ಅಭ್ಯಾಸ ಅವರಿಗೆ ಆಗಬೇಕು. ಆದ್ರೆ ನಾವೂ ನೀವೂ ಮೊದಲು ಕಷ್ಟಪಡಬೇಕಲ್ಲವೇ?'' ನಂಜಪ್ಪನವರಂದರು.

ಮಾತುಗಳಿನ್ನೂ ಬೆಳೆಯುವದರಲ್ಲಿದ್ದವು. ಮಧ್ಯಾನ್ನೂಟದ ಹೊತ್ತಾಗಿದ್ದಿತು. ಶಿವಮೊಗ್ಗೆಯಿಂದ ರಾಮಸ್ವಾಮಿಯವರು ಬಂದಿರು ವರೆಂದು ಒಬ್ಬ ಆಳು ನಮಗೆ ಹೇಳುವದಕ್ಕೆ ಬಂದಿದ್ದನು. ಮನೆಯ ಮಾರ್ಗವನ್ನು ಹಿಡಿದೆವು. ಸ್ವಲ್ಪ ಹೊತ್ತಿನಲ್ಲಿಯೇ ಮನೆಯನ್ನು ಸೇರಿದೆವು. ಅಂದು ಮಹಾನವಮಿ (ಆಯುಧ ನವಮಿ)ಯಾದ್ದರಿಂದ ಜಮೀನು ಸಾಗುವಳಿಯ ಗಳೇದ ಸಾಮಾನುಗಳನ್ನೆಲ್ಲ ಶುದ್ಧಪಡಿಸಿ ಪೂಜೆಯನ್ನು ಮಾಡಿದರು. ಮನೆಯ ಆಳುಹೋಳುಗಳಿಗೆಲ್ಲ ಅಂದು ಕರಿಗಡಬು, ಬೊಂಡಾ, ಪಾಯಸ ಮೊದಲಾದವುಗಳು ಯಥೇಚ್ಛವಾಗಿ ಬಡಿಸಲಾಗಿತ್ತು. "ಇಂದು ಧನೆಯರ ಮನೆಯ ಊಟ'' ನಗುತ್ತ ಕಲೆ ಯುತ್ತ ಊಟಮಾಡುವ ಆ ಬಡ ರೈತರನ್ನು ನೋಡಿ ನನಗೆ ಬಹಳ ಆನಂದವಾಯಿತು. ನಮ್ಮ ಊಟವಾದ ಬಳಿಕ ಮಹಡಿಯ ಮೇಲಿನ ಕೋಣೆಯಲ್ಲಿ ತಾಂಬೂಲ ಚರ್ವಣಮಾಡುತ್ತ ಕುಳಿತಿದ್ದೆವು. ನಾನು ನಂಜಪ್ಪ ರಾಮಸ್ವಾಮಿಯವರ ಹೊರ್ತು ಮತ್ಯಾರೂ ಆ ಕೋಣೆ ಯಲ್ಲಿರಲಿಲ್ಲ.

"ಮೊನ್ನೆ ನೀವು ಬೆಂಗಳೂರು ಬಿಟ್ಟಾಗಿನಿಂದ ಮನೆ ತಲ್ಪೋ ವರೆಗೂ ನಡೆದ ಸಮಾಚಾರವೆಲ್ಲ ಒಂದೂ ಬಿಡದ್ಹಾಂಗೆ ಹೇಳಿ'' ರಾಮ ಸ್ವಾಮಿಯವರು ಅಧಿಕಾರಯುಕ್ತ ವಾಣಿಯಿಂದ ಅಂದರು. ಎಷ್ಟಾ ದರೂ ಗುಪ್ತ ಪೋಲೀಸಿನಲ್ಲಿ ಹುದ್ದೇದಾರರಲ್ಲವೇ ಅವರು, ನಾನು ಎಲ್ಲ ಸಮಾಚಾರವನ್ನು ಚಾ. ಚೂ, ಬಿಡದಂತೆ ಹೇಳಿದೆನು.

"ಬೆಂಗಳೂರಿನಿಂದ ಬಿರೂರದ ವರೆಗೆ ನಿಮಗೆಯೂ ಎಚ್ಚರಿಕೆ ಯಾಗಲಿಲ್ಲವೇ'' ರಾಮಸ್ವಾಮಿಯವರಂದರು.

"ಆಗಿತ್ತು, ನಡುನಡುವೆ ಎಚ್ಚರವಾಗುತ್ತಿತ್ತು''

''ಬಿರೂರಿನಲ್ಲಿ ಸಾಮಾನು ತೆಗೆದು, ಶಿವಮೊಗ್ಗೆಗೆ ಬರುವ ಗಾಡಿ ಯಲ್ಲಿ ಹಾಕುವದಕ್ಕೆ, ಯಾರಾದರು ಕೂಲಿಯವನನ್ನು ಮಾಡಿದ್ದಿರೋ"

"ಹೌದು ಮಾಡಿದ್ದೆ."

''ಅವನು ಎಲ್ಲಿಗೆ ಹೋಗುವಿರಿ ಯಾತಕ್ಕೆ ಹೋಗುವಿರಿ? ಎಂದೇನಾದರೂ ಪ್ರಶ್ನೆ ಮಾಡಿದನೋ?"

"ಹೌದು ಯಾವೂರಿಗೆ ಹೋಗಬೇಕೆಂಬದನ್ನು ಕೇಳಿದ್ರ ಬಿದಿರೆಗೆ ಹೋಗಬೇಕೆಂದು ಹೇಳಿದೆ.

"ಬಿದಿರೇ ಸ್ಟೇಶನ್ನಿನಲ್ಲಿ ನೀವು ಎಷ್ಟು ಹೊತ್ತು ನಿಂತಿದ್ದಿರಿ?''

"ಸುಮಾರು, ಆರೂವರೆ ಗಂಟೆಯಿಂದ, ಹತ್ತು ಗಂಟೆಯ ವರೆಗೆ"

"ಸಿದ್ದನ, ಸಂಬಂಧ ನಿಮಗಾವ ಸಂಶಯವೂ ಉಂಟಾಗಲಿಲ್ಲವೇ?

"ಇಲ್ಲ''

"ನಾಗೊಳ್ಳಿ ಉಪಹಾರಗೃಹದಲ್ಲಿ ಸಿದ್ದನಿಗೆ ಯಾರಾದರೂ ಕೂಡಿದ್ರೆ? ಯಾರ ಜೊತೆಗಾದರೂ ಗುಪ್ತಾಲೋಚನೆ ನಡಿಸಿದ್ದನೇನು?''

"ಇಲ್ಲ, ಅವನಿಗೆ ಯಾರೂ ಕೂಡಿರಲಿಲ್ಲ.''

''ಹೊನ್ನೆಯರಿಯಲ್ಲಿ ಕಮ್ಮಾರ ತುರುಕನೇನಾದರೂ ನಿಮ್ಮ ಜೊತೆಗೆ ಮಾತನಾಡಿದನೇನು?''

"ನನ್ನ ಜೊತೆಗೆ ಮಾತನೇನೂ'' ಆದರೂ ಸಿದ್ದನ ಮಾತಿಗೆ ಉತ್ತರವೆಂದು "ನಿಮ್ಮ ರಾಯರ್ ಹೊಳ್ಯಾಗ ಬಿತ್ತು" ಎಂದು ನುಡಿದ.

"Ah! there you are! ಇಲ್ಲಿಯೇನೋ ಗೂಢವಿದೆ, ಇರಲಿ

ಸಿದ್ದನು ನಿಮಗೆ ಹೊಳೆ ದಂಡೆಗೆ, ಬಿಟ್ಟನಂತರ, ಎಷ್ಟೊತ್ತಿನ ಮೇಲೆ ಅಂಬಿಗರು ಬಂದದ್ದು ?''

"ಸುಮಾರು, ಮೂರು ಗಂಟೆಯ ಮೇಲೆ. ಅಂದರೆ ಒಂಬತ್ತೂವರೆ ಹತ್ತು ಗಂಟೆಗೆ"

ನೀವು ಹರಗೋಲಿನಲ್ಲಿ ಕೂಡ್ರುವ ವರೆಗೂ ಶಿದ್ದನು ಅಲ್ಲಿಯೇ ಇದ್ದನೇ ?''

"ಹೌದು"

"ಅಂಬಿಗರಿಬ್ಬರೂ ನಿಮ್ಮ ಜೊತೆಗೆ ಮಾತನಾಡುತ್ತಿದ್ದರೇ ?''

"ಇಲ್ಲ. ಒಬ್ಬನು ಕೊನೆಯ ವರೆಗೂ ಮೋರೆ ಕೆಳಗೆ ಮಾಡಿ ಕೊಂಡು ಕುಳಿತಿದ್ದನು. ಅವನು ಯಾವ ಮಾತೂ ಆಡಲಿಲ್ಲ."

"ನೀವು ಆ ಸುಮ್ಮನಿದ್ದ ಅಂಬಿಗನನ್ನು ಗುರ್ತಿಸಬಹುದೆ''

"ಆಗದು ಅವನನ್ನು ಚೆನ್ನಾಗಿ ದಿಟ್ಟಿಸಿ ನೋಡಲೇ ಇಲ್ಲ.''

"ಅಂಬಿಗನು ದೇವರಾಣೆ ಮಾಡಿರೆಂದು ಹೇಳಿದ, ಮಾತಿಗೆ, ಅವನಲ್ಲಿ ನಿಮಗೆ ಸಂಶಯವೇನಾದರೂ ಉಂಟಾಯಿತೇ ?''

"ಹೌದು ಪ್ರಬಲ ಸಂಶಯವುಂಟಾಯಿತು. ಕಳ್ಳರೂ ದರೋಡೆ ಖೋರರಾದರೂ, ಅವರಲ್ಲಿರುವ, ಮಲ್ನಾಡು ಭೂಮಿಯ ಪ್ರೀತಿಯೂ ನನಗೆ ದಂಗು ಬಿಡಿಸಿತು. ಅವರಿಗೆ–''

"ನೀವು ನಿಜವಾಗಿಯೂ ಅಂಬಿಗರೆ ?'' ಎಂದು ಕೇಳಿದಾಗ, ಅವರು ಯಾವ ಪ್ರಕಾರದ ಸಂಶಯಕ್ಕೂ, ಅಸ್ಪದವಾಗದಂತೆ, "ಹೌದು ನಾವು ಅಂಬಿಗರೆಂದರು.''

"ಅವರು ಬಿಟ್ಟುಕೊಟ್ಟ ತರಕಾರೀ ಬುಟ್ಟಿಯನ್ನು ನೀವು ಜೊತೆಗೆ ಮನೆಯ ವರೆಗೂ ತಂದಿರಾ?"

"ಇಲ್ಲ ಎಲ್ಲ ಸಾಮಾನು ಕಳಕೊಂಡು, ಜೀವದಿಂದುಳಿದರೆ ಸಾಕೆನಿಸಿತ್ತು, ಆದ್ದರಿಂದ ತರಕಾರೀ ಬುಟ್ಟಿಯನ್ನು ನಾವಿಳಿದ ಜಾಗಾದಲ್ಲಿಯೇ ಬಿಟ್ಟು ಬಂದೆ"

"ದರೋಡೆಖೋರರನ್ನು ಹಿಡಿದು ಕೊಟ್ಟರೆ, ಅವರಿಗೆ ಮಾತು ಕೊಟ್ಟಂತೆ, ನಿಮ್ಮಿಂದ ಕೊನೆಯ ವರೆಗೂ, ಮಲ್ನಾಡಿನ ಉದ್ಧಾರಕ್ಕೋಸ್ಕರ ಹೆಣಗುವದು ಸಾಧ್ಯವಿದೆಯೇನು"

"ಹೌದು ಅವರು ಸಿಗಲಿ, ಸಿಗದಿರಲಿ, ಅವರಿಗೆ ನಾನು ಮಾತು ಕೊಟ್ಟಂತೆ ನಡೆಯುವದು ನನ್ನ ಕರ್ತವ್ಯವಾಗಿದೆ. ಆ ಕರ್ತವ್ಯವನ್ನು, ತನು, ಮನ, ಧನಗಳಿಂದ ಪೂರ್ತಿಗೊಳಿಸಬೇಕೆಂದು, ನನಗೀಗ ಒಂದು ತರದ ಆಶೆಯುಂಟಾಗಿದೆ."

ರಾಮಸ್ವಾಮಿಯವರು, ಬಹಳ ಹೊತ್ತಿನ ವರೆಗೆ ಆಲೋಚಿಸಿ, "ಸರಿ! ಎಲ್ಲ ಕಂಡು ಬಂತು, ನೀವು ನಿಶ್ಚಿಂತರಾಗಿರ್ರಿ. ಇವತ್ತು ನವಮಿ ನಾಳೆ ವಿಜಯಾದಶಿಮಿ, ನಾಡಿದ್ದು, ಏಕಾದಶೀ ಸಾಯಂಕಾಲದೊಳಗಾಗಿ, ಎಲ್ಲವೂ ಗೊತ್ತಾಗುತ್ತದೆ. ದರೋಡೆಖೋರರಿಗೆ ಸೂತ್ರಧಾರ (ಮುಖ್ಯಸ್ಥ, ಚಾಲಕ) ನೊಬ್ಬನಿದ್ದಂತೆ ಕಾಣುತ್ತದೆ. ನಾಡಿದು ಸಾಯಂಕಾಲದೊಳಗಾಗಿ, ನಿಮ್ಮ ಸಾಮಾನು ಸಹಿತ, ಅವರನ್ನು ಹಿಡಿದು ತರುತ್ತೇನೆ" ರಾಮಸ್ವಾಮಿಯವರು ನಿಶ್ಚಿತ ಸ್ವರದಿಂದೆಂದರು. ನನಗೆ ಎಲ್ಲವೂ ಆಶ್ಚರ್ಯಕರವಾಗಿ ತೋರಿತು.

ನಾನೆಷ್ಟೋ ಪತ್ತೆದಾರೀ ಕತೆಗಳನ್ನೋದಿದ್ದೆನು. ಆದರೆ, ಮೂರೇ ದಿನಗಳಲ್ಲಿ, ಆದ ಪ್ರಕರಣದ ಗೊತ್ತು ಹಚ್ಚುವ, ಕತೆಯೊಂದನ್ನೂ ಓದಿರಲಿಲ್ಲಾ.

× × × × × ×

ವಿಜಯಾದಶಮಿಯ ಮಾರನೇ ದಿನ, ನಾನು ನಂಜಪ್ಪನವರು ನಾಲ್ಕು ಗಂಟೆಯ ಸಮಯದಲ್ಲಿ, ಇಸ್ಪೀಟಿನ ಆಟವಾಡುತ್ತ ಕುಳಿತು

ಕೊಂಡಿದ್ದೆವು. ರಾಮಸ್ವಾಮಿಯ ಸ್ನೇಹಿತರಿಬ್ಬರು, ನಮ್ಮ ಆಟದಲ್ಲಿ ಭಾಗ ತೆಗೆದುಕೊಂಡಿದ್ದರು. ಅವರ ಮಾತಿನ ಧ್ವನಿ ಕೇಳಿದಾಗೆಲ್ಲ ನನಗೆ ಏನೋ ಸಂಶಯ ಬಂದಂತಾಗುತ್ತಿತ್ತು. ಆದರೂ ಏನೂ ಮಾತಾಡದೆ ಆಟದಲ್ಲಿ ತಲ್ಲೀನನಾಗುತ್ತಿದ್ದೆನು. ಇಂದು ರಾಮಸ್ವಾಮಿಯವರು, ನನಗೆ ವಚನ ಕೊಟ್ಟಂತೆ, ಸಾಮಾನು ಸಹಿತವಾಗಿ ದರೋಡೆಖೋರರನ್ನು, ಹಿಡಿದುಕೊಂಡು ಬರುವ ವೇಳೆಯಾಗಿತ್ತು.

ಆಟದ ಭರದಲ್ಲಿ ಗಂಟೆ ಐದು, ಆರು, ಏಳು ಕೂಡ ಆಗಿ ಹೋಯ್ತು. ಜಿಟಿಜಿಟಿ ಮಳೆ ಹಿಡಿದಿತ್ತು. ಹೊತ್ತು ಹೋದಂತೆಲ್ಲ ನನ್ನ ಲಕ್ಷವು ರಾಮಸ್ವಾಮಿಯವರ ಆಗಮನದ ಕಡೆಗೆ ಇದ್ದಿತು. ಬೇಸರವಾದ್ದರಿಂದ ಇಸ್ಪೀಟಿನ ಆಟವನ್ನು ಮುಗಿಸಿ ನಾವೆಲ್ಲರೂ ಹರಟೆಹೊಡೆಯುತ್ತ ಕುಳಿತಿರುವಾಗ ರಾಮಸ್ವಾಮಿಯವರು ಬಂದರು. ಅವರು ಮಳೆಯಲ್ಲಿ ತೊಯ್ದು ತಪ್ಪಡಿಯಾಗಿದ್ದರು. ಆದರೂ ಮೊಗದ ಮೇಲೆ ಕೃತಕಾರ್ಯದಿಂದ ಒಂದು ಬಗೆಯ ಸಂತೋಷವು ಹೊರ ಸೂಸುತ್ತಿತ್ತು. "ಭಾವನವರೇ ನಾನು ಮಾತು ಕೊಟ್ಟಂತೆ ಎಲ್ಲ ಕೆಲಸವೂ ಮುಗಿಯಿತು." ಮೈಮೇಲಿನ ಮಳೆಗವಚವನ್ನು Raincoat ತೆಗೆಯುತ್ತ ರಾಮಸ್ವಾಮಿಯವರೆಂದರು.

"ಅಲ್ಲವೇ! ಸಾಮಾನು ಸಹಿತ ಕಳ್ಳರು ಸಿಕ್ಕರೆ" ನಾನು ಆಶ್ಚರ್ಯದಿಂದ ನುಡಿದೆನು.

"ಏನೂ ಸಂದೇಹವೇ ಇಲ್ಲ''ವೆಂದು ಕವಚದ ಜೇಬಿನಿಂದ ಒಂದು ಹೊತ್ತಿಗೆಯನ್ನು ತೆಗೆಯುತ್ತ "ಇದು ನಿಮ್ಮ ಅತ್ಯಂತ ಪ್ರೀತಿಯ Wordsworth ಕಾವ್ಯಗ್ರಂಥವಲ್ಲವೆ?'' ರಾಮಸ್ವಾಮಿಯವರೆಂದರು.

"ಬೇಷ್! ಸಾಮಾನೆಲ್ಲ ತಂದಿರುವಿರಲ್ಲ ಕಳ್ಳರೇನು ಲಾಕಪ್ಪಿನಲ್ಲಿರುವರೇ? '' ನಾನಂದೆ.

"ಕಳ್ಳರೂ ಅವರ ಮುಖ್ಯ ಸೂತ್ರಧಾರನೂ ಒಂದೇ ಸಲ ಸಿಕ್ಕಿಬಿದ್ದರು." ರಾಮಸ್ವಾಮಿಯವರೆಂದರು.

"ಅವರನ್ನು ನಾನು ನೋಡಲಾದೀತೇ'' ನಾನಂದೆ.

"ಆದರೆ ನೀವು ಅವರನ್ನು ಕಾಣಿಸಿಕೊಂಡರೆ ದೇವರಾಣೆ ತೊಟ್ಟ ನಿಮ್ಮ ವಚನಬದ್ಧತೆಯು ಮತ್ತಷ್ಟು ದೃಢವಾಗುವದೆಂಬದನ್ನು ಆಲೋಚಿಸಿರಿ." ಗಂಭೀರವಾಗಿ ರಾಮುಸ್ವಾಮಿಯವರೆಂದರು.

"ಹಾಗೆ ಮಾಡುವದು ನನ್ನ ಕರ್ತವ್ಯವಾಗಿದೆಯೆಂಬದನ್ನು ನಿಮಗೆ ಮೊನ್ನೆಯೇ ಹೇಳಿದೆನಲ್ಲ. ದಯವಿಟ್ಟು ಆ ಕಳ್ಳರು ಎಲ್ಲಿರುವರೆಂಬದನ್ನು ಹೇಳಿರಿ." ನಾನು ಉತ್ಸುಕನಾಗಿ ನುಡಿದೆ.

"ಅವರೆಲ್ಲರೂ ಇವರೇ ಎಂದು'' ರಾಮುಸ್ವಾಮಿಯವರೂ ನಮ್ಮ ಜೊತೆಗೆ ಇಸ್ಪೇಟನ್ನಾಡುತ್ತಿದ್ದ ರಾಮುಸ್ವಾಮಿಯ ಸ್ನೇಹಿತರಿಬ್ಬರೂ ನನ್ನ ಕಾಲಿಗೆ ಬಿದ್ದು, ನನ್ನ ಕಾಲನ್ನು ಹಿಡಿದುಬಿಟ್ಟರು. ನಾನೂ ನಂಜಪ್ಪನವರೂ ಕೆಲವು ಹೊತ್ತು ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಂತುಬಿಟ್ಟೆವು.

* * * * * *

ರಾಮುಸ್ವಾಮಿಯವರು ಯಾವದೋ ಒಂದು ತಮ್ಮ ಪತ್ತೇದಾರೀ ಕೆಲಸಕ್ಕೋಸ್ಕರ ಇಬ್ಬರು ಸಹಾಯಕರೊಡನೆ ಬೆಂಗಳೂರಿಗೆ ಬಂದಿದ್ದರು. ನನಗೆ ದಸರೆಯ ರಜಾದಿನಗಳಲ್ಲಿ ಹಲಸೂರಿಗೆ ಹೋಗಲಿಷ್ಟವಿಲ್ಲೆಂಬದನ್ನೂ ಅದಕ್ಕಿರುವ ಕಾರಣಗಳನ್ನೂ ತಮ್ಮ ಭಗಿನಿ (ವತ್ಸಲೆ)ಯ ಮುಖಾಂತರ ಈ ಮೊದಲೇ ತಿಳಿದುಕೊಂಡಿದ್ದರು. ಅನಾಯಾಸವಾಗಿ ಬೆಂಗಳೂರಿಗೆ ಬಂದದ್ದರಿಂದ ನನಗೆ ದಸರೆಗೆ ಹಲಸೂರಿಗೆ ಬರಲು ಬಲವಂತ ಮಾಡುವದಕ್ಕಾಗಿ ನಾನಿರುವ ಹಾಯ ಗ್ರೌಂಡಿನಲ್ಲಿಯ ಬಂಗ್ಲೆಗೆ ಬಂದಿದ್ದರು. ಸುಮಾರು ಆರೂವರೆ ಗಂಟೆಗೆ ಅವರು ಅಲ್ಲಿಗೆ ಬಂದಿರಬಹುದು. ನಾನಾದರೂ ಅದೇ ದಿವಸ ಹಲಸೂರಿಗೆ ಹೊರಡಲು ಸಿದ್ಧನಾಗಿ ಸಾಮಾನೆಲ್ಲವನ್ನೂ ವಿಶ್ವಾಸಿಕನಾದ ಒಬ್ಬ ಆಳೊಂದಿಗೆ ಸ್ಟೇಶನ್ನಿಗೆ ಸಾಗಿಸಿ ೬ ಗಂಟೆಯಿಂದ ೮|| ಗಂಟೆಯವರೆಗೆ ನಡೆಯಲಿಕ್ಕಿರುವ ಬೆಂಗಳೂರಿಗೆ ಅದೇ ಹೊಸದಾಗಿ ಬಂದಿದ್ದ "ಅಲಂ ಆರ್" ಎಂಬ ಮಾತನಾಡುವ ಚಲಚಿತ್ರವನ್ನು ನೋಡಿ

ರೈಲಿಗೆ ಹೋಗೋಣವೆಂದು ಐದು ಮುಕ್ಕಾಲು ಗಂಟೆಗೆ ಶಾಮನಿಗೆ ಮನೆಯನ್ನು ಸರಿಯಾಗಿ ನೋಡಿಕೊಳ್ಳ ಹೇಳಿ ಬಂಗ್ಲೆಯಿಂದ ಹೊರ ಬಿದ್ದೆನು.

ನಾನು ಹೋದನಂತರ ಸುಮಾರು ಅರ್ಧ ಗಂಟೆಯ ಮೇಲೆ ರಾಮಸ್ವಾಮಿಯವರು ನಮ್ಮ ಬಂಗ್ಲೆಗೆ ಬಂದಿದ್ದರು. ಶಾಮನಿಂದ ನಾನು ಹಲಸೂರಿಗೆ ಹೊರಟಿರುವೆನೆಂಬದನ್ನು ತಿಳಿದರು. ಪುಣೆಯ ಮೇಲುಗಾಡಿಯು ಹೊರಡಲು ಇನ್ನೂ ಮೂರು ಗಂಟೆಯ ಅವಕಾಶ ವಿದ್ದಿತು. ಅವರಾದರೂ ಅದೇ ಗಾಡಿಯಿಂದ ಶಿವಮೊಗ್ಗೆಗೆ ಹೋಗ ಬೇಕಾಗಿದ್ದಿತು. ನಾನು ಎಲ್ಲಿಯೋ ಹೊರಗೆ ಹೋಗಿರಬಹುದೆಂದೂ ನಾನೂ ಅವರೂ ಇಬ್ಬರೂ ಸೇರಿಯೇ ರೈಲಿಗೆ ಹೋಗಬಹುದೆಂದೂ ಬರೆವೋದುವ ಕೊಠಡಿಯಲ್ಲಿ ಕುಳಿತು ನನ್ನ ಬರುವಿಕೆಯ ಹಾದಿಯನ್ನು ನೋಡಹತ್ತಿದರು. ಅಲ್ಲಿ ಕುಳಿತಿರುವಾಗ ಅವರ ಲಕ್ಷ್ಯವು ಸಹಜವಾಗಿ ಅಂಚೆಯೋಲೆಯ ಫೈಲಿನ ಕಡೆಗೆ ಹೋಯಿತು ಎಲ್ಲಕ್ಕೂ ಮೇಲಿ ರುವ, ನಾನು ನನ್ನ ಪತ್ನಿಗೆ ಬರೆದ ಕಾಗದವು ಕಣ್ಣಿಗೆ ಬಿದ್ದಿತು. ಬೆಂಗಳೂರಿಗೆ ಹೊರಡುವ ತಾರೀಖು, ಬಿದಿರೆಗೆ ತಲ್ಪಬಹುದಾದ ವೇಳೆ, ಅಲ್ಲಿಂದ ಹಲಸೂರಿಗೆ ಬರಲು ಮಾಡಬೇಕಾದ ತಕ್ಕ ಸೌಕರ್ಯಗ ಳನ್ನೆಲ್ಲ, ಆ ಕಾಗದದಲ್ಲಿ ಬರೆದದ್ದು, ರಾಮಸ್ವಾಮಿಯವರು ಓದಿಕೊಂ ಡರು. “ಓಹೊ! ಭಾವನವರು ಕಾಗದವನ್ನು ಪೋಸ್ಟಿಗೆ ಹಾಕುವ ದರ ಬದಲಾಗಿ ಮರೆತು ಫೈಲಿಗೆ ಸಿಗಹಾಕಿದ್ದಾರೆ.” ಎಂದು ಈ ನನ್ನ ಎಬ್ಬಂಕತನದ ಉಪಯೋಗವನ್ನು ಮಾಡಿಕೊಳ್ಳಬೇಕೆಂದು ಒಂದು ಯೋಚನೆ ಹುಟ್ಟಿತು ಅವರಿಗೆ. ಎಷ್ಟಾದರೂ ಅವರು ಗುಪ್ತ ಪೋಲಿಸಿನಲ್ಲಿ ನುರಿತವರವರು. ನನ್ನ ನಿಜವಾದ ಪತ್ರವು ವತ್ಸಲೆಗೆ ತಲುಪದ್ದರಿಂದ ಹಲಸೂರಿಗೆ ಕರೆದೊಯ್ಯಲು ಬಿದಿರೆ ಸ್ಟೇಶನ್ನಿಗೆ ಯಾರೂ ಬರಲಿಕ್ಕಿಲ್ಲೆಂಬದನ್ನು ರಾಮಸ್ವಾಮಿಯವರು ಆಗಲೇ ಕಂಡು ಹಿಡಿದರು. ನನ್ನ ಮನಸ್ಸಿನಲ್ಲಿಯ “ಮಳೆಗಾಲದ ಮಲೆನಾಡಿನ” ವಿಷಯದ ತಿರಸ್ಕಾರವನ್ನು ಹೋಗಲಾಡಿಸುವದಕ್ಕೆ ಇದೊಂದು ಸುಸ

ಮುಯವೆಂದಂದುಕೊಂಡರು. ಮಲೆನಾಡಿನ ದುರ್ದಸೆಯನ್ನೂ ಅಲ್ಲಿಯ ಹುಂಬ ಜನರ ಕರುಣಾಜನಕ ಸ್ಥಿತಿಯನ್ನೂ ನನ್ನಲ್ಲಿ ಹೃದಯಂಗಮವಾಗಿ ಚಿತ್ರಿಸುವದಕ್ಕೆ ಇದು ತಕ್ಕ ಸಮಯವೆಂದು ಯೋಚಿಸಿದರು.

ನಾನು ಸಿನೇಮಾ ನೋಡಿದನಂತರ ಪರಸ್ಪರ ಸ್ಟೇಶನ್ನಿನ ಹಾದೀ ಹಿಡಿದೆನು. ಮನೆಯಲ್ಲಿ ರಾಮಸ್ವಾಮಿಯವರು ಎಂಟೂವರೆ ಗಂಟೆಯ ವರೆಗೆ ನನ್ನ ಹಾದೀ ನೋಡಿ ಬಾರದಿರಲು ಶಾಮನಿಂದ ಮತ್ತೊಂದು ಸಲ ನಾನು ಹಲಸೂರಿಗೆ ಹೋಗುವದು ನಿಜವೆಂದು ತಿಳಿದುಕೊಂಡು ತಮ್ಮಿಬ್ಬರು ಸಹಾಯಕರೊಡನೆ ಸ್ಟೇಶನ್ನಿಗೆ ಬಂದರು. ನಾನು City Booking Officeನಲ್ಲಿಯೇ ತಿಕೀಟು ತೆಗೆದದ್ದರಿಂದ ಸಾಮಾನು ಸಹಿತವಾಗಿ ಬಂದು ಅನುಕೂಲ ಸ್ಥಳವನ್ನು ನೋಡಿ ಗಾಡಿಯಲ್ಲಿ ಕುಳಿತಿದ್ದೆನು. ರಾಮಸ್ವಾಮಿಯವರು ನನ್ನನ್ನು ಹುಡುಕುತ್ತ ಬಂದು ನಾನು ಗಾಡಿಯಲ್ಲಿ ಕುಳಿತಿರುವೆನೆಂಬದನ್ನು ಮನಗಂಡು ಅವರೂ ಅವರಿಬ್ಬರ ಸಹಾಯಕರೂ ಅದೇ ಮೇಲಗಾಡಿಯ ಬೇರೊಂದು ಕ್ಯಾರೇಜಿನಲ್ಲಿ ಕುಳಿತರು. ವಾಚಕರೇ! ಈ ತ್ರಿಮೂರ್ತಿಗಳೇ ಗಾಡಿಹೊಡೆಯುವ ಸಿದ್ದ, ಕಮ್ಮಾರ ತುರುಕ, ಹೊಳೆದಾಟಿಸುವ ಅಂಬಿಗನ ವೇಷಧಾರಣಮಾಡಿದ್ದರು. ಕಮ್ಮಾರ ತುರುಕನ ವೇಷಧಾರಣಮಾಡಿದವರೇ ರಾಮಸ್ವಾಮಿಯವರು. ಅವರೇ ಮುಂದೆ ಮೌನವ್ರತಸ್ಥ ಎರಡನೇ ಅಂಬಿಗನ ವೇಷವನ್ನು ಧರಿಸಿದ್ದರು.

ನನ್ನನ್ನು ಠಕ್ಕಿಸುವ ಕಾರ್ಯಕ್ರಮಗಳೆಲ್ಲವೂ, ಯಾವ ಪ್ರಕಾರದಿಂದ ಜರಗಿಸಲ್ಪಡಬೇಕೆಂಬದನ್ನು, ಅವರು ಬೆಂಗಳೂರಿನಿಂದ ಬಿರೂರವರೆಗಿನ ಪ್ರವಾಸದ ಸಮಯದಲ್ಲಿಯೇ ನಿಶ್ಚಯಿಸಿದ್ದರು. ಅವರಲ್ಲೊಬ್ಬರು, ಬೀರೂರಿನಲ್ಲಿ ಕೂಲಿಯವನಾಗಿ ನನ್ನ ಸಾಮಾನುಗಳನ್ನೆಲ್ಲ; ಶಿವಮೊಗ್ಗೆಗೆ ಹೋಗುವ ಗಾಡಿಯಲ್ಲಿ ಹಾಕಿದನು. ಅವನೇ ಮುಂದೆ ಸಿದ್ದನಾಗಿ, ಬಿದಿರೆ ಸ್ಟೇಶನ್ನಿನಲ್ಲಿ ಕಂಡುಕೊಂಡನು. ಥೈಲಿನಲ್ಲಿರಿಸಿದ್ದ ಪತ್ರವನ್ನು, ರದ್ದುಪಡಿಸಿ, ನಾನು ಬೇರೊಂದು ಕಾಗದವನ್ನು ನನ್ನ ಪತ್ನಿಗೆ ಬರೆದಿದ್ದ ಪಕ್ಷದಲ್ಲಿ ನಿಜವಾಗಿಯೂ ಹಲಸೂ

ರಿಂದ ಯಾರಾದರೊಬ್ಬರು, ಬಿದಿರೆ ಸ್ಟೇಶನ್ನಿಗೆ ನನ್ನನ್ನು ಕರೆದೊಯ್ಯಲು ಬರುವ ಸಂಭವವಿದ್ದದ್ದರಿಂದ, ಸುಮಾರು, ನಾಲ್ಕು ಗಂಟೆಗಳ ಕಾಲ, ಹಾದಿಯ ನೋಡಿ ಹತ್ತುವರೆ ಗಂಟೆಗೆ ಕೋಣ ಎತ್ತು ಹೂಡಿದ ಗಾಡಿಯಲ್ಲಿ ನನ್ನನ್ನು ಸಾಗಿಸಬೇಕೆಂದು ಆ ಧೂರ್ತರು ಮೊದಲೇ ನಿಶ್ಚಯಿಸಿದ್ದರು. ಇದೆಲ್ಲ ಸಮಾಚಾರವು ನಂಜಪ್ಪನವರಿಗೂ ನನ್ನ ಪತ್ನಿ ವತ್ಸಲೆಗೂ ತಿಳಿದಿರಲಿಲ್ಲ.

ನನ್ನ ಕಾಲಿಗೆ ಬಿದ್ದಿದ್ದ ರಾಮುಸ್ವಾಮಿಯನ್ನು ಸಂತೈಸಿ ಹಸ್ತ ಲಾಘವ ಮಾಡಿದೆನು. "ಆದದ್ದೆಲ್ಲ ಬುದ್ಧಿಕಲಿಸಿತು. ಪ್ರವಾಸದಲ್ಲಿ ನಿಮ್ಮ ನಿಮ್ಮ ಪಾರ್ಟಗಳನ್ನು ಚನ್ನಾಗಿ ಮಾಡಿದ್ದಿರಿ'' ಉಲ್ಲಾಸ ದಿಂದ ನಾನಂದೆ.

"ಜ್ಞಾನತಪ್ಪುವವರೆಗೂ ತಮಾಷೆಮಾಡುವದು ಸರಿಯಾಗಿಲ್ಲ'' ನಂಜಪ್ಪನವರೆಂದರು.

"ಹೋಡಿ ಈ ರಾಮುಸ್ವಾಮೀ ತಮಾಷೆ ಸ್ವಭಾವಕ್ಕೆ ಮದ್ದೆ ಇಲ್ಲ.'' ನಮ್ಮತ್ತೆಯವರೆಂದರು.

"ಜನ್ಗಳಿಗೆ ಸುಮ್ಮಕೆ ಅಳಸೋದು ಏನು ಚನ್ನಾಗಿತ್ತೋ? ನಾಕಾಣೆ ಅಣ್ಣಯ್ಯ'' ಎಂದು ಮಹಡಿಯ ಬಾಗಿಲ ಹತ್ತರ ನಮ್ಮ ಮಾತುಕತೆ ಕೇಳುತ್ತಿದ್ದ ವತ್ಸಲೆಯು ಏರುಗಟ್ಟಿದಳು.

ರಾಮುಸ್ವಾಮಿಯ ಸ್ನೇಹಿತರಿಬ್ಬರೊಡನೆ ನಮ್ಮೆಲ್ಲರ ಭೋಜನ ವಾಯಿತು. ಭೋಜನಾಂತರ ಸಿದ್ದನ ವೇಷ ಧರಿಸಿದ ರಾಮುಸ್ವಾಮಿಯ ಮಿತ್ರರು ಬೋಳುಗಾಡಿಯಲ್ಲಿ ನಾನು ತಂದ್ರಾವಸ್ಥೆಯಲ್ಲಿರುವಾಗ್ಗೆ ಕೇಳಿದ "ಆಡಿಸಿದಳಶೋದೆ'' ಎಂಬ ಲಕ್ಷ್ಮೀಬಾಯಿಯ ಸಂಗೀತವನ್ನು ಬಹಳ ಮಧುರವಾಗಿ ಹಾಡಿದರು.

---

**ತುಸು ಹಣದಲ್ಲಿ ರಸಸಾಹಿತ್ಯ! ಅಲ್ಲದೆ ಅಲಭ್ಯವಾದ ಲಾಭ!!**

**೧೯೩೪ ನೆಯ ಜನೆವರಿಯ ಮೊದಲಲ್ಲಿ ಹೊರಡಲಿರುವ**

# ರಾಜಹಂಸ ವಿಶೇಷಸಂಚಿಕೆ.

## ವಾಚಕರಿಗೆ ನೂರು ರೂಪಾಯಿ ಬಹುಮಾನ.

ಈ ವರ್ಷದ ನಮ್ಮ ವಿಶೇಷಸಂಚಿಕೆಯು ವಿಶೇಷ ಸೌಂದರ್ಯಗಳಿಂದ ವಿಶೇಷ ಗುಣಗಳಿಂದ ಕೂಟಪ್ರಶ್ನೆಗಳಿಂದ ಒಡಗೂಡಿ ಹೊರಡುವದು. ಅದರಲ್ಲಿ ಮೈಸೂರ ಸಾಹಿತ್ಯಸಮ್ಮೇಲನದ ಅಧ್ಯಕ್ಷರಾದ ಶ್ರೀ. ಆಲೂರ ವೆಂಕಟರಾಯರ, ವೀರಶೈವ ಮಹಾಸಭೆಯ ಕಾರ್ಯದರ್ಶಿಗಳಾದ ಶ್ರೀ. ಕೇಸರಿ ಮಹಾದೇವಪ್ಪನವರ, ಸಣ್ಣ ಕತೆಗಳ ಸಾಹಿತ್ಯಪ್ರಪಂಚದಲ್ಲಿ ಹೆಸರುಪಡೆದ ಆನಂದಕಂದರ, ಜಯಕರ್ನಾಟಕ ಸಂಪಾದಕರಾದ ಶ್ರೀ. ಬೆಳಗಾವಿ ರಾಮಚಂದ್ರರಾಯರ— ಇನ್ನೂ ಅನೇಕ ಗಣ್ಯಸಾಹಿತಿಗಳ ಬರಹಗಳು ಬರಲಿವೆ.

### ಮನೆಗೆ ಹಣವನ್ನು ತಂದುಕೊಡುವ ಅಂಕಿಗಳು
### ( Lucky Numbers )

ವಿಶೇಷಸಂಚಿಕೆಯಲ್ಲಿ ಪ್ರತಿಯೊಂದರಲ್ಲಿಯೂ ಕ್ರಮಾಂಕಗಳನ್ನು ಒಂದು ಕುಪ್ಪನಿನಲ್ಲಿ ಬರೆದಿರುತ್ತವೆ ಕೆಲವೊಂದು ಅಂಕಿಗಳಿಗೆ ಒಟ್ಟು ೧೦೦ ರೂಪಾಯಿಯ ಬಹುಮಾನವನ್ನಿಟ್ಟಿದ್ದು ಆ ಅಂಕಿಗಳನ್ನು ಪ್ರಕಟವಾದಂದಿನಿಂದ ಕೆಲವೊಂದು ಕಾಲಾವಧಿಯಲ್ಲಿ ಪ್ರಕಾಶಪಡಿಸುವೆವು. ಆ ಅಂಕಿಗಳೇ, ಆ ಸಂಚಿಕೆಯನ್ನು ಕೊಂಡ ಕನ್ನಡ ಭಾಷಾಭಿಮಾನಿಗೆ ನಿಶ್ಚಿತಗೊಳಿಸಿದ ಬಹುಮಾನವನ್ನು ಕೊಡುವವು.

ಹೀಗೆ ನಮ್ಮ ವಿಶೇಷ ಸಂಚಿಕೆಯನ್ನು ಕೊಳ್ಳುವ ಸುದೈವಿಗಳಿಗೆ ಅಮೌಲ್ಯ ಸಾಹಿತ್ಯವಲ್ಲದೆ, ಮೇಲೆ ಬಹುಮಾನ.

**ಈ. ಎಸ್. ಬೇಬಾಳ ಅಲಿಶ್ಯಾ ಕಾದ್ರಿ ಸರಗಿರೋ ಬಾನವಾ**
**ಮುನಜಿಮು, ಜಾಫರ, ರಮುಲ, ಜೋತಿಷ್ಯ, ಹಸ್ತಸಾಮುದ್ರಿಕ**
**ಮತ್ತು ಮುಖಸಾಮುದ್ರಿಕ ಶಾಸ್ತ್ರಜ್ಞರು**

ಗಣೇಶಪೇಟ ಸ್ಟೇಶನ್ ರೋಡ, ಹುಬ್ಬಳ್ಳಿ.

ಜಿಲ್ಲಾ ಧಾರವಾಡ ಇಲಾಖಾ ಮುಂಬಯಿ

ನಿಮಗೆ ತ್ರಾಸವಾಗಿದೆಯೋ? ಹಾಗಾದರೆ ನೀವು ಏನಾದರೂ ಕೆಲಸ ಮಾಡುವ ಮೊದಲು ನಿಮ್ಮ ನಶೀಬದ ಕಡೆಗೆ ಲಕ್ಷ್ಯಗೊಡಿರಿ ಮತ್ತು ನಮ್ಮನ್ನು ವಿಚಾರಿಸಿರಿ. ಅಂದರೆ ನಾವು ನಿಮಗೆ ನಮ ದೈವೀ ರಮುಲ ಶಾಸ್ತ್ರದ ಆಧಾರದಿಂದ ನಿಮ್ಮ ಕೆಲಸಗಳಲ್ಲಿಯ ಯಶೊಪಾಯಗಳನ್ನು ಹೇಳುವೆವು. ಮತ್ತು ನಿಮ್ಮ ಕೆಲಸಗಳಲ್ಲಿ ಆಗುವ ತ್ರಾಸಗಳನ್ನು ಮತ್ತು ಕಷ್ಟಗಳನ್ನು ನಾವು ದೂರ ಮಾಡುವೆವು ಮತ್ತು ಅದರ ಯೋಗದಿಂದ ಯಾವ ದೇವರ ದಯಯಿಂದ ನಿಮಗೆ ಖಾತ್ರಿಯಿಂದ ಯಶವು ದೊರೆಯುವದು. ನಿಮ್ಮ ಕಷ್ಟಗಳನ್ನು ದೂರ ಮಾಡುವ ಬಗ್ಗೆ ನಾವು ತೆಗೆದುಕೊಳ್ಳುವ ದರಗಳನ್ನು ಸಮಕ್ಷವ ಆಗರ ಪತ್ರವ್ಯವಹಾರದಿಂದ ತಿಳಕೊಳ್ಳತಕ್ಕದ್ದು.

ಪ್ರಶ್ನಗಳನ್ನು ಕೇಳುವ ಕಾಲಕ್ಕೆ ಮುಖ್ಯವಾಗಿ ನೆನಪಿನಲ್ಲಿಡತಕ್ಕ ಸಂಗತಿಗಳು ಏನಂದ್ರೆ ಪ್ರಶ್ನಗಳನ್ನು ಬರೆಯುವ ವ್ಯಾಳ್ಯ ಬರೆಯತಕ್ಕದ್ದು ಮತ್ತು ೧ ರಿಂದ ೧೦೦ ರ ವರೆಗಿನ ಅಂಕಿಗಳಲ್ಲಿ ಯಾವದಾದರೂ ನಾಲ್ಕು ಅಂಕಿಗಳನ್ನು ಬರೆಯತಕ್ಕದ್ದು ಶಕ್ಯವಿದ್ದಲ್ಲಿ ಜನ್ಮ ಕುಂಡಲಿಯನ್ನು ಸಂಗಡ ಕಳಿಸಬೇಕು.

ಸಾವಿರಾರು ಸರ್ಟಿಫಿಕೇಟುಗಳ ಪೈಕಿ ಇದೊಂದು
ಮಾದರಿಗಾಗಿ ಕೊಟ್ಟಿರುತ್ತದೆ

**ಮಿ. ಎ ಎಸ್. ಬೇಬಾಳಅಲಿಶ್ಯಾ ಖಾದ್ರಿ ಸಾಕೀನ ಹುಬ್ಬಳ್ಳಿ**

ಇವರದು ಪರಿಚಯು ನನಗೆ ಸಂಪೂರ್ಣವಿರುತ್ತದೆ. ಇವರ ರಮುಲ, ಜೋತಿಷ್ಯ, ಹಸ್ತಪರೀಕ್ಷೆ ವಗೈರೆ ಶಾಸ್ತ್ರಗಳಲ್ಲಿ ಪ್ರವೀಣರಿದ್ದಾರೆ. ಇವರ ಜ್ಞಾನದ ಅನುಭವವನ್ನು ಒಮ್ಮೆ ತೆಗೆದುಕೊಂಡು ಖಾತ್ರಿಯಾಗುವದು.

ಸಹಿ— **ಚಂದಾವರಕರ,**
ಇನ್‌ಸ್ಪೆಕ್ಟರ ಆಫ್ ಪೋಲೀಸ ಧಾರವಾಡ

# ದಿ ಯುನಾಯಿಟೆಡ್ ಕರ್ನಾಟಕ ಇನ್ಸುರನ್ಸ ಕಂಪನಿ ಲಿಮಿಟೆಡ್, ಧಾರವಾಡ.



ಕನ್ನಡಿಗರೆಲ್ಲರೂ ಉತ್ತರ ಕನ್ನಡನಾಡಿನಲ್ಲಿ ಮೊಟ್ಟಮೊದಲು ಹುಟ್ಟಿದ ಈ **ಕನ್ನಡಿಗರ ಕಂಪನಿ**ಗಾಗಿ ಮಾಡಬೇಕಾದುದೆಲ್ಲವನ್ನೂ ಮಾಡಿಯೇ ತೀರುವರೆಂಬುದೇ ನಮ್ಮ ಬಲವಾದ ನಂಬಿಗೆ ಇದೆ.

ವಿಮೆಯ ಕೆಲಸವನ್ನು ಮಾಡಲು ಎಲ್ಲ ಕಡೆಯಲ್ಲಿಯೂ **ಏಜಂಟರು** ಬೇಕು. ಕೆಲಸ ಮಾಡಲಿರುವವರು [illegible]ಗನವರಿಗೆ ಬರೆದು ಕೇಳ್ಳಬೇಕು.

ವೈದ್ಯಕೀಯ ಪರೀಕ್ಷೆ ರಹಿತವಾದ ಮತ್ತು ಎಲ್ಲರಿಗೂ ಸುಲಭ ಸಾಧ್ಯವಾದ "**ರುಪೀ ಪಾಲಿಸಿಯು**" ಹೊಸ ಯೋಜನೆಯು ಮಾಡಲಾಗಿದೆ.

**ಕೆ. ಎಲ್ ಹುಯಿಲಗೋಳ** ಎಲ್ ಎಲ್. ಬಿ.
ಸೆಕ್ರೆಟರಿ

---

## ಕನ್ನಡಿಗರೇ

ಕನ್ನಡನಾಡಿನ ಮೂಲೆಮೂಲೆಯ ಸುದ್ದಿಗಳೂ ನುರಿತ ಬರೆಹಗಾರರ ಬರೆಹಗಳೂ ವಿಪುಲವಾಗಿ ಓದಲು ದೊರೆಯಬೇಕಾಗಿದ್ದರೆ ದೈನಿಕ ಹಾಗು ಸಾಪ್ತಾಹಿಕ ರಾಜಹಂಸವನ್ನು ತಪ್ಪದೆ ಓದಿರಿ.

## ವ್ಯಾಪಾರಸ್ಥರೇ

ನಿಮ್ಮ ಹೆಸರು, ನಿಮ್ಮ ಮಾಲಿನ ಕೀರ್ತಿ ಕರ್ನಾಟಕದಲ್ಲಿ ಎಲ್ಲ ಕಡೆಗೂ ಹಬ್ಬಬೇಕೆಂದು ನಿಮ್ಮ ಉತ್ಕಟ ಮನೀಷೆಯಲ್ಲವೇ? ಹಾಗಾದರೆ ಎಲ್ಲೆಲ್ಲಿಯೂ ಶಂಚರಿಸುವ ಡೈನಿಕ ಹಾಗು ಸಾಪ್ತಾಹಿಕ ರಾಜಹಂಸದಲ್ಲಿ ಜಾಹೀರಾತು ಕೊಡಿರಿ. ದರ ತೀರ ಸುಲಭ.